# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು

ಎಚ್ಚೆಸ್ಕೆ

ಡಿಸೆಂಬರ್ ೧೯೮೦

೨

ಸಮನ್ವಯ ಸಮಿತಿ (ರಿ.)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ
ಬೆಂಗಳೂರು - 560 002

ಹಣ, ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಸಮನ್ವಯ ಸಮಿತಿ

(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)

ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಪ್ರಕಾರ ನೋಂದಾಯಿಸಿದೆ.
ಕ್ರಮಸಂಖ್ಯೆ 170–80–81



## ಉದ್ದೇಶಗಳು

ಕರ್ನಾಟಕದಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕಿನ ಶಾಖೆಗಳಲ್ಲಿ ಕನ್ನಡ ಸಂಘಗಳ ಸ್ಥಾಪನೆಗೆ ನೆರವಾಗುವುದು, ತನ್ಮೂಲಕ ಕನ್ನಡ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ತೀವ್ರಗೊಳಿಸುವುದು

ಬ್ಯಾಂಕಿಂಗ್ ವಿಷಯದ ಬಗ್ಗೆ ಒಂದು ನಿಯತಕಾಲಿಕವನ್ನು ಪ್ರಕಾಶಿಸುವುದು ಮತ್ತು ತತ್ಸಂಬಂಧಿಯಾದ ವಿಷಯಗಳ ಬಗ್ಗೆ ನಿಘಂಟು ಮತ್ತು ಇತರ ಪುಸ್ತಕಗಳನ್ನು ತಜ್ಞರಿಂದ ಬರೆಯಿಸಿ ಪ್ರಕಟಿಸುವುದು

ಶಾಖಾ ಕನ್ನಡ ಸಂಘಗಳು ಕೈಗೊಳ್ಳಬಹುದಾದ ಕಾರ್ಯಕ್ರಮಗಳ ಬಗ್ಗೆ ಸಲಹೆ, ಸಹಕಾರ ಮತ್ತು ಸಹಾಯ ನೀಡುವುದು

ಕನ್ನಡ ಸಾಹಿತ್ಯ, ಕಲೆ, ಜನಪದ ಇತ್ಯಾದಿಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಕನ್ನಡ ಸಂಘಗಳಿರುವ ಶಾಖೆಗಳಲ್ಲಿ ವಿಚಾರಗೋಷ್ಠಿ, ಉಪನ್ಯಾಸ ಇತ್ಯಾದಿಗಳನ್ನು ಏರ್ಪಡಿಸುವುದು ಮತ್ತು ಇನ್ನಿತರ ಪೂರಕ ಚಟುವಟಿಕೆಗಳನ್ನು ಸಮಿತಿಯು ನೇರವಾಗಿಯೂ, ದತ್ತಿನಿಧಿಯನ್ನು ಸ್ಥಾಪಿಸುವುದರ ಮೂಲಕವೂ ಮತ್ತು ಸಮಾನ ಉದ್ದೇಶಗಳುಳ್ಳ ಇತರ ಸಂಘಸಂಸ್ಥೆಗಳೊಂದಿಗೆ ರೂಪಿಸಿಯೂ ನಿರ್ವಹಿಸುವುದು

# ಬ್ಯಾಂಕಿಂಗ್ ಪ್ರಪಂಚ

ಹಣ, ಬ್ಯಾಂಕಿಂಗ್ ವಿಚಾರಗಳಿಗೆ
ಮೀಸಲಾದ ಅರ್ಧವಾರ್ಷಿಕ

ಸಂಪುಟ ೧ ಸಂಚಿಕೆ ೨
ಜ[illegible]
ಡಿಸೆಂಬರ್ ೧೯೮೦

ಸಂಪಾದಕ
ಎಚ್ಚೆಸ್ಕೆ



ಶೀರ್ಷಿಕೆ ವಿನ್ಯಾಸ—ಗಿರಿಧರ ಖಾಸನೀಸ



**ವಾರ್ಷಿಕ ಚಂದಾ ರೂ. ೫**

**ಬಿಡಿ ಪ್ರತಿ ರೂ. ೩**

# ಬ್ಯಾಂಕಿಂಗ್ ಪ್ರಪಂಚ

---

## ಪರಿವಿಡಿ

# ಬ್ಯಾಂಕಿಂಗ್ ಪ್ರಪಂಚ

## ಈ ಸಂಚಿಕೆಯ ಲೇಖನದಾರರು

**ಒ. ಡಿ. ಹೆಗ್ಗಡೆ,** ಅರ್ಥಶಾಸ್ತ್ರ ಅಧ್ಯಾಪಕ, ಸ್ನಾತಕೋತ್ತರ ಅರ್ಥಶಾಸ್ತ್ರ ವಿಭಾಗ, ಮಂಗಳಗಂಗೋತ್ರಿ, ಕೊಣಾಜೆ, ಮಂಗಳೂರು

**ಡಾ. ಎನ್. ಎಸ್. ಭಟ್,** ರೀಡರ್, ಅರ್ಥಶಾಸ್ತ್ರ, ಸೆಂಟ್ ಫಿಲೊಮಿನಾ ಕಾಲೇಜು, ಪುತ್ತೂರು (ದ.ಕ)

**ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ,** ಕುಮಾರಕೃಪ, 1438, ಹಳೇ ಅಗ್ರಹಾರ, ಮೈಸೂರು-570 004

**ಕೃಷ್ಣೇಗೌಡ,** ಅರ್ಥಶಾಸ್ತ್ರ ಅಧ್ಯಾಪಕ, ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-570 006

**ವೈ. ಎಸ್. ಉಷಾ,** ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ, ಕುಮಾರ ಪಾರ್ಕ್ ಶಾಖೆ, ಬೆಂಗಳೂರು

**ಸಿ. ಕೆ. ರೇಣುಕಾರ್ಯ,** ಅಧ್ಯಾಪಕ, ಸ್ನಾತಕೋತ್ತರ ಅರ್ಥಶಾಸ್ತ್ರ ವಿಭಾಗ, ಮಾನಸಗಂಗೋತ್ರಿ, ಮೈಸೂರು 570 006

**ಎಚ್. ಜಿ. ಸೋಮಶೇಖರರಾವ್,** ಶಾಖಾಧಿಕಾರಿ, ಕೆನರಾ ಬ್ಯಾಂಕ್, ಜಯಲಕ್ಷ್ಮೀಪುರಂ, ಮೈಸೂರು 570 012

**ಎಚ್ಚೆಸ್ಕೆ,** ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಈ ನಿಯತಕಾಲಿಕದ ಸಂಪಾದಕ

**'ಸ್ಯಾಂ', ಸಾ. ಅ. ಮಂಜುನಾಥ**

**ಸೂ. ಸುಬ್ರಹ್ಮಣ್ಯಂ,** ರಿಸರ್ವ್ ಬ್ಯಾಂಕ್ ಕನ್ನಡ ಸಂಘದ ಸ್ಥಾಪಕಾಧ್ಯಕ್ಷ

# ಸಂಪಾದಕೀಯ

'ಬ್ಯಾಂಕಿಂಗ್ ಪ್ರಪಂಚ'ದ ಎರಡನೆಯ ಸಂಚಿಕೆ ತಡವಾಗಿ ನಿಮ್ಮ ಕೈ ಸೇರುತ್ತಿದೆ. ನಮ್ಮ ಕೈ ಮೀರಿದ ಹಲವಾರು ಅಡಚಣೆಗಳು ಇದಕ್ಕೆ ಕಾರಣ. ಇಂಥ ಒಂದು ಪತ್ರಿಕೆಯ ಆರಂಭ ದೆಶೆಯಲ್ಲಿ ಈ ಅಡಚಣೆಗಳು ಸಾಮಾನ್ಯ. ಇವನ್ನೆಲ್ಲ ಕ್ರಮೇಣ ನಿವಾರಿಸಿ ಪತ್ರಿಕೆಯನ್ನು ಸಕಾಲದಲ್ಲಿ ಹೊರಡಿಸುವುದು ಬೇಗ ಸಾಧ್ಯವಾದೀತೆಂಬುದು ನಮ್ಮ ಆಸೆ.

ಹಣ–ಬ್ಯಾಂಕಿಂಗ್ ಕ್ಷೇತ್ರಕ್ಕೆ ಮೀಸಲಾದ ಇಂಥದೊಂದು ನಿಯತಕಾಲಿಕವನ್ನು ಹೊರ ತರುವುದೇನೂ ಸುಲಭದ ಕೆಲಸವಲ್ಲ. ಲೇಖಕರೂ ಮುದ್ರಕರೂ ಸಂಪಾದಕರೂ ಸಂಘಟಕರೂ ಸಂಮಿಳಿತರಾದಾಗಲೇ ಇದು ಸಾಧ್ಯ. ಇವುಗಳಲ್ಲಿ ಯಾವುದೊಂದು ಅಂಶ ಹಾಳತ ತಪ್ಪಿದರೂ ವಿಳಂಬ ಅನಿವಾರ್ಯ. ಈ ಸಾಮರಸ್ಯ ಸಾಧನೆಗೆ ಸ್ವಲ್ಪ ಕಾಲ ಅಗತ್ಯ. ಆ ನಿಟ್ಟಿನಲ್ಲಿ ಪ್ರಯತ್ನ ಸಾಗಿಸುವ ಭರವಸೆ ನಮ್ಮದು.

'ಬ್ಯಾಂಕಿಂಗ್ ಪ್ರಪಂಚ'ವನ್ನಾರಂಭಿಸುವ ಯೋಜನೆಯನ್ನು ಮುಂದಿಟ್ಟಾಗ, ಕನ್ನಡದಲ್ಲಿ ಇದು ಸಾಧ್ಯವಾಗದೆಂದು ಸಂಶಯ ವ್ಯಕ್ತಪಡಿಸಿದವರಿಲ್ಲದಿಲ್ಲ. ಬಹುಶಃ ಬೇರಾವ ಭಾರತೀಯ ಭಾಷೆಯಲ್ಲೂ ಇಂಥ ಪ್ರಯತ್ನ ನಡೆದಿಲ್ಲವೆಂಬುದು ಒಂದು ಕಾರಣ. ಈ ವಿಚಾರವನ್ನು ಕುರಿತು ಕನ್ನಡದಲ್ಲಿ ಬರೆಯಬಲ್ಲವರು ಒಂದು ಕೈಬೆರಳೆಣಿಕೆಗೂ ಸಾಲದಷ್ಟು ಕಡಿಮೆಯೆಂಬುದು ಇನ್ನೊಂದು ಕಾರಣ. ಜೊತೆಗೆ ಮುದ್ರಣವೆಚ್ಚ ತೂಗಿಸುವುದೇನೂ ಈಗಿನ ದಿನಗಳಲ್ಲಿ ಸಾಮಾನ್ಯವಲ್ಲ.

ಲೇಖನಗಳನ್ನು ಕುರಿತಂತೆ ನಿರಾಶಾವಾದಕ್ಕೆ ಕಾರಣವೇ ಇಲ್ಲವೆಂಬುದು ನಮ್ಮ ಅನುಭವ. ಇರುವ ಕೆಲವೇ ಲೇಖಕರನ್ನೇ ಪದೇ ಪದೇ ಆಶ್ರಯಿಸಬೇಕೆನ್ನುವಂಥ ದಾರಿದ್ರ್ಯವೇನೂ ಇಲ್ಲ. ಯುವಕರಲ್ಲಿ ಅನೇಕ ಮಂದಿ ಉತ್ಸಾಹಿಗಳಿದ್ದಾರೆ. ಇವರ ಉತ್ಸಾಹಕ್ಕೆ ಸಮಸಮನಾಗಿ ದುಡಿಮೆಯೂ ಕೂಡಿಬಂದರೆ ಇವರು ಒಳ್ಳೆಯ ಲೇಖನಗಳನ್ನು ಬರೆದಾರೆಂದು ಆಶಿಸಬಹುದು. ಬ್ಯಾಂಕಿಂಗ್ ಎಂದರೆ ಕೇವಲ ಅಂಕಿ-ಅಂಶಗಳಲ್ಲ, ಆಗಿರುವ ಕೆಲಸದ ವರದಿ ಮಾತ್ರವಲ್ಲ. ಬ್ಯಾಂಕಿಂಗ್ ಒಂದು ಕಲೆ ಕೂಡ. ಸೀಮಿತ ಸಾಮರ್ಥ್ಯ ಕುಶಲತೆಗಳನ್ನು ಅನುಕೂಲತಮ ರೀತಿಯಲ್ಲಿ ಜೋಡಿಸಿ ಗರಿಷ್ಠ ಫಲ ದೊರಕಿಸುವ ಕ್ರಿಕೆಟ್ ಆಟದಂತೆಯೇ ಇದು ಕೂಡ. ರಕ್ಷಣೆ, ಆಕ್ರಮಣ—ಎರಡೂ ಕೂಡಿದ ಈ ಆಟದಲ್ಲಿ ಕ್ಷೇತ್ರವಿನ್ಯಾಸವೂ ಬಲು ಮುಖ್ಯ. ಬ್ಯಾಂಕಿಂಗ್ ಕೂಡ ಹೀಗೆಯೇ. ಲಭ್ಯವಿರುವ ಸಾಧನಗಳನ್ನು ಯಾವಯಾವ ರೂಪದಲ್ಲಿ, ಎಷ್ಟೆಷ್ಟು ದೂರದಲ್ಲಿ ವಿನ್ಯಾಸಗೊಳಿಸಿಕೊಂಡಿದ್ದರೆ ಸೇವೆ-ಲಾಭ-ದ್ರವತ್ವ-ಭದ್ರತೆಗಳ ಚತುರ್ಮುಖ ಸಾಧನೆ ಮಾಡಬಹುದೆಂಬುದು ಬ್ಯಾಂಕರನ ನಿತ್ಯಕಾಳಜಿ. ಈ ಗುರಿಯ ಸಾಧನೆಯಲ್ಲೇ ಬ್ಯಾಂಕಿನ ಸಾರ್ಥಕ್ಯ. ಹೀಗೆ ಕಲಾತ್ಮಕ ಹಾಗೂ ಗುಣಾತ್ಮಕ ದೃಷ್ಟಿಯಿಂದ ಬ್ಯಾಂಕಿಂಗ್ ಕಲಾಪಗಳನ್ನು ಅವಲೋಕಿಸಿ, ಅದರ ಹಲವಾರು ಆವಿಷ್ಕಾರಗಳನ್ನು ವಿಶ್ಲೇಷಿಸಿ ಲೇಖನ ಬರೆಯುವ ಕಲೆಯನ್ನು ನಾವು ಅಭ್ಯಾಸ ಮಾಡಬೇಕಾಗಿದೆ. ಆಗ ಹಣ ಬ್ಯಾಂಕಿಂಗ್ ವಿಚಾರಗಳೂ ರಂಜಕವಾಗುತ್ತವೆ,

ಉಪಯುಕ್ತವಾಗುತ್ತವೆ. ಹಣ ಬ್ಯಾಂಕಿಂಗ್‌ಗಳಲ್ಲಿ ಆಸಕ್ತಿ ಇಲ್ಲದವರೇ ಬಹುಶಃ ಇಂದು ಇಲ್ಲ. ಅವರನ್ನೆಲ್ಲ ಗುರಿಯಲ್ಲಿಟ್ಟು ಬರೆದ ಲೇಖನಗಳು ನಮ್ಮ ಇಂದಿನ ಅಗತ್ಯ. ಇಂಥ ಲೇಖನಗಳನ್ನು ಬರೆಯಬಲ್ಲವರ ದೊಡ್ಡ ಪೀಳಿಗೆಯ ಸೃಷ್ಟಿಯ ಕಾರ್ಯ ಇಂದು ಆಗಬೇಕಾಗಿದೆ. ಇದನ್ನು ಸಾಧಿಸಲು ಈ ನಿಯತಕಾಲಿಕ ಪ್ರಯತ್ನಿಸುತ್ತದೆ. ಬ್ಯಾಂಕಿಂಗ್ ಉದ್ಯಮದಲ್ಲೇ ನಿರತರಾದವರಿಗೆ ಇದೊಂದು ಕೈಪಿಡಿಯಾಗಬೇಕೆಂಬುದೂ ನಮ್ಮ ಉದ್ದೇಶ.

ನಾವು ಎದುರಿಸಬೇಕಾದ ಇನ್ನೊಂದು ಸಮಸ್ಯೆ ಹಣದ್ದು. ಆರ್ಥಿಕ ದೃಷ್ಟಿಯಿಂದ ನೆಮ್ಮದಿಯಾಗಿರುವಂಥ ಪರಿಸ್ಥಿತಿಯೇನೂ ಪತ್ರಿಕೆಗೆ ಇಲ್ಲ. ಆದರೆ ಹಣದ ಕಾರಣದಿಂದಾಗಿಯೇ ಯಾವ ಒಳ್ಳೆಯ ಕೆಲಸವೂ ನಿಲ್ಲಬಾರದು, ನಿಲ್ಲುವುದಿಲ್ಲ, ನಿಂತಿಲ್ಲ—ಎಂಬುದಕ್ಕೆ ಈ ಪತ್ರಿಕೆಯೂ ಸಾಕ್ಷಿ. ನೂರಾರು ಕೈಗಳು ಕೂಡಿ ಇದನ್ನು ಮುನ್ನಡಸುವವೆಂಬ ಭರವಸೆ ನಮಗಿದೆ. ಈ ನೆರವು ಮುಂದುವರಿಯುವುದೆಂಬುದರಲ್ಲಿ ಸಂಶಯವಿಲ್ಲ.

ಇನ್ನುಳಿದದ್ದು ವಾಚಕ ಪ್ರಪಂಚ. ಈ ನಿಟ್ಟಿನಲ್ಲೇ ನಮಗೆ ಸ್ವಲ್ಪ ನಿರಾಶೆ. ಭಾರತೀಯ ಸ್ಟೇಟ್ ಬ್ಯಾಂಕಿನ ಕನ್ನಡ ಸಂಘಗಳ ಸಮನ್ವಯ ಸಮಿತಿ ಹೊರಡಿಸುತ್ತಿರುವ ಈ ನಿಯತ ಕಾಲಿಕವನ್ನು ಆ ಬ್ಯಾಂಕಿನ ಅಧಿಕೃತ ಪ್ರಕಟನೆಯೆಂದೂ, ಆ ಸಂಸ್ಥೆಗಷ್ಟೇ ಇದು ಸೀಮಿತವೆಂದೂ ಅನೇಕರು ಭಾವಿಸಿದ್ದಾರೆ. ಆದರೆ ಇದರ ಉದ್ದೇಶ ಇನ್ನೂ ವ್ಯಾಪಕವಾದ್ದು. ಹಣ ಬ್ಯಾಂಕಿಂಗ್ ಕುರಿತಂತೆ ಆರೋಗ್ಯಕರ ವಿಚಾರಗಳನ್ನು ಎಲ್ಲರಲ್ಲೂ ಪ್ರಚಾರಪಡಿಸುವುದು ಇದರ ಗುರುತರ ಹೊಣೆ. ಎಲ್ಲ ಬ್ಯಾಂಕಿಂಗ್ ಕಛೇರಿಗಳೂ ಸಾರ್ವಜನಿಕರೂ ವಿದ್ಯಾರ್ಥಿಗಳೂ ಈ ನಿಯತಕಾಲಿಕ ವನ್ನು ಸ್ವಾಗತಿಸಬೇಕು; ಇದರ ಉಪಯುಕ್ತತೆ ಬೆಳೆಯುವಂತೆ ಮಾಡಬೇಕು; ತಮ್ಮಲ್ಲಿರುವ ವಿಚಾರಗಳನ್ನು ಇದರೊಂದಿಗೆ ಹಂಚಿಕೊಳ್ಳಬೇಕು. ಹಾಗಾದೀತೆಂಬುದು ನಮ್ಮ ನಂಬಿಕೆ.

# ಕರ್ನಾಟಕದಲ್ಲಿ ಗ್ರಾಮೀಣ ಬ್ಯಾಂಕಿಂಗ್

ಒ. ಡಿ. ಹೆಗ್ಗಡೆ

**ಸಮನ್ವಯ ಸಮಿತಿ ಏರ್ಪಡಿಸಿದ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ ಪ್ರಬಂಧ. ಕರ್ನಾಟಕದಲ್ಲಿ ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆಯ ಸ್ವರೂಪ, ಬೆಳವಣಿಗೆ ಹಾಗೂ ಸಮಸ್ಯೆಗಳ ಚರ್ಚೆ**

ಕರ್ನಾಟಕದಲ್ಲಿ ಗ್ರಾಮೀಣ ಬ್ಯಾಂಕಿಂಗ್ ಎಂಬ ವಿಷಯವನ್ನು ಕುರಿತು ವಿವೇಚಿಸುವಾಗ ರಾಷ್ಟ್ರೀಯ ಬ್ಯಾಂಕಿಂಗ್ ವ್ಯವಸ್ಥೆಗೆ ಕರ್ನಾಟಕದ ಕೊಡುಗೆಯನ್ನು ಒತ್ತಿ ಹೇಳುವುದು ಆವಶ್ಯಕ. ಇಲ್ಲದಿದ್ದರೆ ರಾಜ್ಯದಲ್ಲಿ ಬ್ಯಾಂಕಿಂಗ್ ಬೆಳವಣಿಗೆಯನ್ನು ಆರಂಭಿಸಿ ಅದನ್ನು ಸಮರ್ಥಶಾಲಿ ಯುವಪೀಳಿಗೆಯನ್ನಾಗಿಸಿ ರಾಷ್ಟ್ರವ್ಯಾಪಿಗೊಳಿಸಿದ ಬ್ಯಾಂಕಿಂಗ್ ನೇತಾರರಿಗೆ ಅಪಚಾರ ಬಗೆದಂತೆ ಆಗುವುದು. ರಾಷ್ಟ್ರೀಯ ಬ್ಯಾಂಕಿಂಗ್ ವ್ಯವಸ್ಥೆಗೆ ವಾಣಿಜ್ಯ ಬ್ಯಾಂಕುಗಳ ರಥವನ್ನು ಕೊಂಡೊಯ್ದವರು ಕರ್ನಾಟಕ ರಾಜ್ಯದ ಕರಾವಳಿ ಜಿಲ್ಲೆಯಾದ ದಕ್ಷಿಣ ಕನ್ನಡದವರು. ರಾಷ್ಟ್ರೀಯ ಬ್ಯಾಂಕಿಂಗ್ ವ್ಯವಸ್ಥೆಗೆ ನಮ್ಮ ರಾಜ್ಯದ ಕೊಡುಗೆಯಾಗಿವೆ ಇಂದಿನ ಕೆನರಾ, ಕಾರ್ಪೊರೇಷನ್, ಸಿಂಡಿಕೇಟ್, ವಿಜಯಾ ಬ್ಯಾಂಕುಗಳು ರಾಷ್ಟ್ರೀಕೃತ ರಂಗದಲ್ಲಿ; ಹಾಗೂ ಖಾಸಗಿ ಕ್ಷೇತ್ರದಲ್ಲಿ ಕರ್ನಾಟಕ ಬ್ಯಾಂಕ್. ಈ ಐದೂ ಬ್ಯಾಂಕುಗಳು ದಕ್ಷಿಣ ಕನ್ನಡ ಜಿಲ್ಲೆಯ ಕೊಡುಗೆಯಾಗಿವೆ. ಈ ಬ್ಯಾಂಕುಗಳನ್ನು ಪೋಷಿಸಿ, ಅಭಿವೃದ್ಧಿಪಡಿಸಿ ರಾಷ್ಟ್ರಕ್ಕೆ ಅರ್ಪಿಸಿದ ಕೀರ್ತಿ, ಗೌರವ ಸಂಬಂಧಿತ ಹಿರಿಯ ಜೀವಗಳಿಗೆ ಸಲ್ಲಬೇಕು.

ನಮ್ಮ ದೇಶದ ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆ ಸಹಕಾರಿ ಸಾಲ ಹಣ ಬ್ಯಾಂಕುಗಳು, ಭೂ ಅಭಿವೃದ್ಧಿ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು ಮತ್ತು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸಂಘಟಿತ ಕ್ಷೇತ್ರದಲ್ಲಿ ಒಳಗೊಂಡಿದೆ; ಹಾಗೂ ಸಂಘಟಿತವಲ್ಲದ ಕ್ಷೇತ್ರದಲ್ಲಿ ಮುಖ್ಯವಾಗಿ ಖಾಸಗಿ ಲೇವಾದೇವಿಗಾರರನ್ನು ಸ್ಥಳೀಯ ಬ್ಯಾಂಕರುಗಳನ್ನಾಗಿ ಪಡೆದಿದೆ. ಗ್ರಾಮೀಣ ಪ್ರದೇಶದ ಸಂಘಟಿತ ಮತ್ತು ಸಂಘಟಿತವಲ್ಲದ ಬ್ಯಾಂಕಿಂಗ್ ಉದ್ಯಮಗಳ ಸಮಗ್ರ ಚಿತ್ರವೇ ಗ್ರಾಮೀಣ ಬ್ಯಾಂಕಿಂಗ್ ಆಗಿದೆ. ಇಂತಹ ವ್ಯವಸ್ಥೆಯಿಂದ ಕರ್ನಾಟಕ ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆ ಹೊರತಲ್ಲ.

ಗ್ರಾಮೀಣ ಪ್ರದೇಶದಲ್ಲಿ ತಮ್ಮ ತಮ್ಮ ಶಾಖೆಗಳನ್ನು ಬೃಹತ್ ಪ್ರಮಾಣದ ರಾಷ್ಟ್ರೀಕೃತ ಬ್ಯಾಂಕುಗಳು ತೆರೆಯಲಾರಂಭಿಸಿದಂದಿನಿಂದ (1969) ನಮ್ಮ ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆಗೆ ಹೊಸ ಆಯಾಮ ದೊರೆತಂತಾಯಿತು. ಬಹುತೇಕವಾಗಿ ನಮ್ಮ ದೇಶದ ಎಲ್ಲಾ ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಖಾಸಗಿ ಅನುಸೂಚಿತ ವಾಣಿಜ್ಯ ಬ್ಯಾಂಕುಗಳು ಶಾಖಾ ಬ್ಯಾಂಕಿಂಗ್ ಪದ್ಧತಿಯನ್ನು ಅನುಸರಿಸುತ್ತಿವೆ. ತಮ್ಮ ತಮ್ಮ ವಿಸ್ತೃತ ಶಾಖಾವ್ಯವಸ್ಥೆ, ಅಗಾಧ ಬ್ಯಾಂಕಿಂಗ್ ಅನುಭವ, ನುರಿತ ಸಿಬ್ಬಂದಿ, ವಿಪುಲವಾದ ಠೇವಣಿ ಸಂಪನ್ಮೂಲಗಳಿಂದಾಗಿ ಶಾಖಾ ಬ್ಯಾಂಕಿಂಗ್ ವ್ಯವಸ್ಥೆಯನ್ವಯ ಸಮುದಾಯಕ್ಕೆ, ಅದರಲ್ಲೂ ಹಿಂದುಳಿದ ಗ್ರಾಮೀಣ ಸಮುದಾಯಕ್ಕೆ, ನಿಸ್ಪೃಹವಾದ ಸೇವೆ ಸಲ್ಲಿಸಲು ವಾಣಿಜ್ಯ ಬ್ಯಾಂಕುಗಳು ಪ್ರಯತ್ನ ನಡೆಸಿವೆ. ಈ ಒಂದು ದಶಕದಲ್ಲಿ (1969–79) ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಅಭಿವೃದ್ಧಿಗೆ ವಿಪುಲ ನೆರವನ್ನು ನೀಡಿವೆ.

ಸಹಕಾರಿ ಉದರಿ ಬ್ಯಾಂಕಿಂಗ್ ಪದ್ಧತಿ ನಮ್ಮ ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆಯ ಅತ್ಯಂತ ಹಳೆಯ ವ್ಯವಸ್ಥಿತ ಪದ್ಧತಿಯಾಗಿದೆ. ಸಹಕಾರಿ ಉದರಿ ಬ್ಯಾಂಕಿಂಗ್ ಪದ್ಧತಿಯನ್ನು ಮೂರು ಹಂತಗಳಲ್ಲಿ ವ್ಯವಸ್ಥಿತಗೊಳಿಸಲಾಗಿದೆ. ಪ್ರತಿಯೊಂದು ರಾಜ್ಯ ಮಟ್ಟದಲ್ಲೂ ಕೇಂದ್ರೀಯ ಅಪೆಕ್ಸ್ ಸಹಕಾರಿ ಬ್ಯಾಂಕಿರುತ್ತದೆ. ಇದರ ಅಧೀನ ಸಂಸ್ಥೆಗಳಾಗಿ ಜಿಲ್ಲಾ ಮಟ್ಟಗಳಲ್ಲಿ ಜಿಲ್ಲಾ ಕೇಂದ್ರ ಸಹಕಾರಿ ಉದರಿ ಬ್ಯಾಂಕುಗಳು ಅಸ್ತಿತ್ವದಲ್ಲಿವೆ. ಗ್ರಾಮ ಮಟ್ಟದಲ್ಲಿ ಸರ್ವೇಸಾಮಾನ್ಯವಾಗಿ ಪ್ರಾಥಮಿಕ ಕೃಷಿ ಸಹಕಾರಿ ಉದರಿ ಸಂಸ್ಥೆಗಳು ಅಸ್ತಿತ್ವದಲ್ಲಿವೆ. ಅಲ್ಲದೆ ತೀರ ಈಚಿನ ವರ್ಷಗಳಲ್ಲಿ ಜಿಲ್ಲಾ ಕೇಂದ್ರ ಸಹಕಾರಿ ಉದರಿ ಬ್ಯಾಂಕುಗಳು ಜಿಲ್ಲೆಯ ಪ್ರತಿಯೊಂದು ತಾಲ್ಲೂಕು ಮುಖ್ಯಪಟ್ಟಣ ಮತ್ತು ಹೆಚ್ಚಿನ ಜನಸಾಂದ್ರತೆಯಿರುವ ಹೋಬಳಿ ಮುಖ್ಯ ಸ್ಥಳಗಳಲ್ಲಿ ತಮ್ಮ

ಶಾಖಾ ಕಛೇರಿಗಳನ್ನು ತೆರೆಯುತ್ತಿವೆ. ಈ ದಿಸೆಯಲ್ಲಿ ಸಹಕಾರಿ ಬ್ಯಾಂಕುಗಳೂ ವಾಣಿಜ್ಯ ಬ್ಯಾಂಕುಗಳಂತೆಯೇ ಶಾಖಾ ಬ್ಯಾಂಕಿಂಗ್ ಪದ್ಧತಿಯನ್ನು ಅನುಸರಿಸುತ್ತಿವೆ.

ಕೃಷಿಯ ಅಭಿವೃದ್ಧಿಗಾಗಿ ನಮ್ಮ ದೇಶ ಮತ್ತು ಕರ್ನಾಟಕ ರಾಜ್ಯದಲ್ಲಿ ದೀರ್ಘಕಾಲೀನ ಹಣಕಾಸು ಸಂಪನ್ಮೂಲ ಪೂರೈಸಲು ಸ್ಥಾಪಿಸಲಾದ ಭೂ ಅಭಿವೃದ್ಧಿ ಬ್ಯಾಂಕುಗಳು ಬಹು ಹಿಂದಿನಿಂದಲೂ ಕಾರ್ಯಾಚರಣೆಯಲ್ಲಿವೆ. ಪ್ರತಿಯೊಂದು ರಾಜ್ಯದಲ್ಲೂ, ಕರ್ನಾಟಕವೂ ಸೇರಿದಂತೆ, ರಾಜ್ಯಮಟ್ಟದ ಭೂ ಅಭಿವೃದ್ಧಿ ಬ್ಯಾಂಕ್‌ನ ಫೆಡರೇಷನ್ ಅಸ್ತಿತ್ವದಲ್ಲಿರುತ್ತದೆ. ತಾಲ್ಲೂಕು ಮುಖ್ಯ ಕೇಂದ್ರಗಳಲ್ಲಿ ಪ್ರತಿಯೊಂದು ಭೂ ಅಭಿವೃದ್ಧಿ ಬ್ಯಾಂಕು ಸಹ ತನ್ನ ಶಾಖೆಗಳನ್ನು ತೆರೆದಿದೆ. ಇವುಗಳನ್ನು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಎಂದು ಕರೆಯಲಾಗುತ್ತದೆ.

ರಾಜ್ಯಮಟ್ಟದ ಸಹಕಾರಿ ಅಪೆಕ್ಸ್ ಬ್ಯಾಂಕಿಗೆ ಪ್ರತಿನಿಧಿಗಳನ್ನು ಪ್ರತಿಯೊಂದು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನಿಂದಲೂ ಆರಿಸಲಾಗುತ್ತದೆ. ಹೀಗೆ ಆರಿಸಲಾದ ಸದಸ್ಯರು ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ನಿರ್ದೇಶಕರುಗಳಾಗಿ ಕಾರ್ಯ ನಿರ್ವಹಿಸುತ್ತಾರೆ. ಅಪೆಕ್ಸ್ ಬ್ಯಾಂಕಿನ ನಿರ್ದೇಶಕ ಮಂಡಳಿ ಬ್ಯಾಂಕಿನ ಅಧ್ಯಕ್ಷರನ್ನು ಆಯ್ಕೆ ಮಾಡುತ್ತದೆ. ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷರು ನಿರ್ದೇಶಕ ಮಂಡಳಿಯ ಅಧ್ಯಕ್ಷರಾಗಿರುತ್ತಾರೆ. ಸಹಕಾರಿ ಉದರಿ ಬ್ಯಾಂಕಿಂಗ್ ವ್ಯವಸ್ಥೆಯ ಕಾರ್ಯಾಚರಣೆಯ ಬಗೆಗೆ ನೀತಿಯನ್ನು ರೂಪಿಸಿ ಅನುಸರಣೆಗೆ ತರುವ ಹೊಣೆ ಅಪೆಕ್ಸ್ ಬ್ಯಾಂಕಿನ ಅಧ್ಯಕ್ಷ ಮತ್ತು ಅದರ ನಿರ್ದೇಶಕ ಮಂಡಳಿಯದಾಗಿರುತ್ತದೆ. ಪ್ರತಿಯೊಂದು ಪ್ರಾಥಮಿಕ ಕೃಷಿ ಸಹಕಾರಿ ಉದರಿ ಸಂಸ್ಥೆಗೆ ಸಂಬಂಧಿತ ಗ್ರಾಮದ ಷೇರುದಾರರಿಂದ ಸದಸ್ಯರನ್ನು ಚುನಾವಣೆ ಮೂಲಕ ನಿರ್ದೇಶಕ ಮಂಡಳಿಗೆ ಆಯ್ಕೆ ಮಾಡಲಾಗುತ್ತದೆ. ಈ ನಿರ್ದೇಶಕ ಮಂಡಳಿ ತನ್ನ ಅಧ್ಯಕ್ಷನನ್ನು ಚುನಾವಣೆಯ ಮೂಲಕ ಆಯ್ಕೆ ಮಾಡುವುದು. ಪ್ರತಿಯೊಂದು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿಗೆ ಸದಸ್ಯರನ್ನು ಪ್ರತಿಯೊಂದು ತಾಲ್ಲೂಕಿನ ಪ್ರಾಥಮಿಕ ಸಂಘಗಳಿಂದ ಚುನಾಯಿಸಲಾಗುತ್ತದೆ. ತಾಲ್ಲೂಕುಗಳು ದೊಡ್ಡವಾಗಿದ್ದರೆ, ಹೋಬಳಿಗಳ ಆಧಾರದ ಮೇಲೆ ಚುನಾವಣೆ ನಡೆಸಲಾಗುತ್ತದೆ. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿಗೆ ಚುನಾಯಿತರಾದ ಸದಸ್ಯರು ತಮ್ಮ ಅಧ್ಯಕ್ಷನನ್ನು ಚುನಾಯಿಸುತ್ತಾರೆ. ಹಾಗೆಯೇ ಪ್ರತಿಯೊಂದು ರಾಜ್ಯದ, ಕರ್ನಾಟಕವೂ ಸೇರಿದಂತೆ, ಭೂ ಅಭಿವೃದ್ಧಿ ಬ್ಯಾಂಕಿಗೆ ತಾಲ್ಲೂಕು ಮಟ್ಟದ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕಿನಿಂದ ನಿರ್ದೇಶಕರನ್ನು ಚುನಾಯಿಸಲಾಗುತ್ತದೆ. ಇಂತಹ ನಿರ್ದೇಶಕ ಮಂಡಳಿ ಪುನಃ ತಮ್ಮ ಅಧ್ಯಕ್ಷನನ್ನು ಚುನಾಯಿಸುತ್ತದೆ. ಪ್ರತಿಯೊಂದು ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕು ಸಮಗ್ರ ನೀತಿಗೆ ಧಕ್ಕೆ ಬಾರದಂತೆ ತನ್ನ ಜಿಲ್ಲೆಗಳ ಕೃಷಿ ಅಭಿವೃದ್ಧಿಗೆ ಪೂರಕವಾದ ರೀತಿಯಲ್ಲಿ ನೀತಿಗಳನ್ನು ರೂಪಿಸಿ ಅನುಸರಣೆಗೆ ತರುತ್ತದೆ.

ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಮತ್ತು ಸಂಬಂಧಿತ ರಾಜ್ಯ ಸರ್ಕಾರಗಳ ವ್ಯಾಪ್ತಿಯಲ್ಲಿ ಸಹಕಾರಿ ಬ್ಯಾಂಕುಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳು ಕಾರ್ಯ ಎಸಗುವುವು. ವಾಣಿಜ್ಯ ಬ್ಯಾಂಕುಗಳು ಭಾರತ ಸರ್ಕಾರ ಮತ್ತು ರಿಸರ್ವ್ ಬ್ಯಾಂಕು ಕಾಲದಿಂದ ಕಾಲಕ್ಕೆ ರೂಪಿಸುವ ನೀತಿಗಳಿಗೆ ಅನ್ವಯವಾಗಿ ಕಾರ್ನೋನ್ಮುಖವಾಗುವುವು.

ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆಗೆ ವಿನೂತನವಾಗಿ ಪದಾರ್ಪಣ ಮಾಡಿದ ಹಣಕಾಸು ಸಂಸ್ಥೆಗಳೆಂದರೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳೇ ಆಗಿವೆ. '. . . ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಹಕಾರಿ ಹಾಗೂ ವಾಣಿಜ್ಯ ಬ್ಯಾಂಕುಗಳ ಅನೇಕ ಉತ್ತಮ ಗುಣಗಳನ್ನು ಹೊಂದಿ ಸ್ಥಾಪಿಸಲ್ಪಡುತ್ತಿರುವ ವಿನೂತನ ಹಣಕಾಸು ಸಂಸ್ಥೆಗಳಾಗಿವೆ. ಅಲ್ಲದೆ ಈ ಗ್ರಾಮೀಣ ಬ್ಯಾಂಕುಗಳು ಇದುವರೆಗೆ ಸಹಕಾರಿ ಬ್ಯಾಂಕುಗಳಿಗೆ ಮಾತ್ರ ಸೀಮಿತವಾಗಿದ್ದ ಹಾಗೂ ಅವುಗಳ ಪ್ರತ್ಯೇಕ ಹಕ್ಕುಗಳೆನಿಸಿದ್ದ ಅನೇಕ ತೆರನಾದ ರಿಯಾಯಿತಿ ಮತ್ತು ಅನುಕೂಲತೆಗಳನ್ನು ಇನ್ನು ಮುಂದೆ ಪಡೆಯಲು ಅರ್ಹವೆನಿಸುತ್ತವೆ. ಒಟ್ಟಿನಲ್ಲಿ ಈ ವಿನೂತನ ಗ್ರಾಮೀಣ ಬ್ಯಾಂಕುಗಳು ವಾಣಿಜ್ಯ ದೃಷ್ಟಿಯಲ್ಲಿ ರೂಪಿತವಾಗಿ, ಗ್ರಾಮಾಂತರ ಪ್ರದೇಶದ ಅಭಿವೃದ್ಧಿಗಾಗಿ ಸರ್ಕಾರದಿಂದಲೇ ನೇರವಾಗಿ ಸ್ಥಾಪಿಸಲ್ಪಡುತ್ತಿರುವ ಹಣಕಾಸು ಸಂಸ್ಥೆಗಳಾಗಿವೆ.'[1]

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಎಲ್ಲ ವಾಣಿಜ್ಯ ಬ್ಯಾಂಕುಗಳಂತೆಯೇ ಕಾರ್ಯ ನಿರ್ವಹಿಸುತ್ತವೆ. ಈ ಗ್ರಾಮೀಣ ಬ್ಯಾಂಕುಗಳು ಇತರ ವಾಣಿಜ್ಯ ಬ್ಯಾಂಕುಗಳಂತೆಯೇ ಠೇವಣಿ ಸ್ವೀಕರಿಸುತ್ತವೆ ಹಾಗೂ ಸಾಲ ನೀಡುತ್ತವೆ. ಅಂದರೆ ಇವು ಎಲ್ಲ ವಿಧವಾದ ಬ್ಯಾಂಕಿಂಗ್ ಸೌಲಭ್ಯಗಳನ್ನು ಕಲ್ಪಿಸಿಕೊಡುವುವಲ್ಲದೆ ವಾಣಿಜ್ಯ ಬ್ಯಾಂಕ್‌ಗಳಂತೆಯೇ ಕರ್ತವ್ಯ ನಿರ್ವಹಿಸುವುವು. ಆದರೆ ಗ್ರಾಮೀಣ ಬ್ಯಾಂಕುಗಳು ವಾಣಿಜ್ಯೋದ್ಯಮವನ್ನು ಕೈಗೊಳ್ಳುವುದನ್ನಾಗಲಿ ತಮ್ಮ ಸ್ವಂತ ಉಪಯೋಗಕ್ಕಲ್ಲದೆ ಇತರ ಉದ್ದೇಶಗಳಿಗಾಗಿ ಬ್ಯಾಂಕೇತರ ಆಸ್ತಿ ಹೊಂದಿರುವಿಕೆಯನ್ನಾಗಲಿ ನಿಷೇಧಿಸಲಾಗಿದೆ. ಪ್ರತಿಯೊಂದು ಗ್ರಾಮೀಣ ಬ್ಯಾಂಕು ಸಹ ನಿಗದಿಪಡಿಸಿದ ಶೇಕಡಾವಾರು ಪ್ರಮಾಣದಲ್ಲಿ ತಮ್ಮ

1 ಒ. ಡಿ. ಹೆಗ್ಗಡೆ: ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ; 'ಉದಯರವಿ' ಸಂಪುಟ 1 ; ಸಂಚಿಕೆ 17 ; ಮಂಡ್ಯ; 30-5-1976 ಪು. 2.

ನಿಯತಕಾಲಿಕ ಹಾಗೂ ಉಳಿತಾಯ ಠೇವಣಿಗಳ ಮೊತ್ತಕ್ಕೆ ಅನುಗುಣವಾಗಿ ಮೀಸಲು ಹಣವನ್ನು ಹೊಂದಿರಬೇಕಲ್ಲದೆ, ಉಳಿಕೆಯನ್ನು ಸಾಲ ನೀಡುವುದರ ಜೊತೆಗೆ ಸರ್ಕಾರಿ ಮತ್ತು ಒಪ್ಪಿಗೆ ಪಡೆಯಲ್ಪಟ್ಟ ಷೇರುಗಳಲ್ಲಿ ಹೆಚ್ಚು ದ್ರವ್ಯತೆ ಇರುವಂತೆ ಹೂಡಬೇಕು.[2]

ಒಟ್ಟಿನಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಹಕಾರಿ ಬ್ಯಾಂಕಿಂಗ್ ಮತ್ತು ವಾಣಿಜ್ಯ ಬ್ಯಾಂಕಿಂಗ್ ಪದ್ಧತಿಗಳ ಸಮರ್ಪಕ ಸಂಮಿಶ್ರಣವಾಗಿವೆ. ಇಂದು ಕರ್ನಾಟಕದಲ್ಲಿ ತುಂಗಭದ್ರಾ, ಕಾವೇರಿ, ಮಲಪ್ರಭಾ ಮತ್ತು ಕೃಷ್ಣಾ ಎಂಬ ನಾಲ್ಕು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿವೆ. 1980–81ರಲ್ಲಿ ಪುನಃ 9 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಆರ್ಥಿಕವಾಗಿ ತೀರಾ ಹಿಂದುಳಿದಿರುವ ಕೃಷಿ ಪ್ರಧಾನವಾದ ಜಿಲ್ಲೆಗಳಲ್ಲಿ ಸ್ಥಾಪಿಸಲು ಕರ್ನಾಟಕ ಸರ್ಕಾರ ತೀರ್ಮಾನಿಸಿದೆ.

### ಸಹಕಾರಿ ಸಂಸ್ಥೆಗಳು

ಸಹಕಾರಿ ಉದರಿ ಸಂಸ್ಥೆಗಳು ಮತ್ತು ಬ್ಯಾಂಕುಗಳು ಕೃಷಿ ಹಣಕಾಸನ್ನು ಮೂರು ಹಂತಗಳಲ್ಲಿ ಪೂರೈಸುತ್ತಿವೆ. 1956ರಲ್ಲಿ ಭಾಷಾನುಗುಣ ರಾಜ್ಯವಾಗಿ ಕರ್ನಾಟಕವನ್ನು ರಚಿಸಿದ ಅನಂತರ ನಮ್ಮ ರಾಜ್ಯದಲ್ಲಿ ಸಹಕಾರ ಚಳವಳಿ ಗಮನಾರ್ಹವಾದ ಬೆಳವಣಿಗೆ ಸಾಧಿಸಿದೆ. 1955–56 ಮತ್ತು 1972–73ರ ಅವಧಿಯಲ್ಲಿ ರಾಜ್ಯದ ಕೃಷಿಕ್ಷೇತ್ರಕ್ಕೆ ಪೂರೈಸಲಾದ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಹಣ ಗಣನೀಯ ಪ್ರಮಾಣದ್ದಾಗಿದೆ. ಈ ಅವಧಿಯಲ್ಲಿ ಕೃಷಿಗೆ ನೀಡಲಾದ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಹಣ ರೂ. 5.5 ಕೋಟಿಯಿಂದ ರೂ. 50 ಕೋಟಿಗೆ ಹೆಚ್ಚಳವಾಯಿತು. ಅಂತೆಯೇ ದೀರ್ಘಾವಧಿ ಸಾಲಹಣ ಪ್ರಮಾಣ ರೂ. 0.34 ಕೋಟಿಯಿಂದ ರೂ. 20 ಕೋಟಿಗೆ ಏರಿಕೆಯಾಯಿತು. ಇದೇ ಅವಧಿಯಲ್ಲಿ ಈ ಹಣಕಾಸು ಸಂಸ್ಥೆಗಳು ವಿತರಿಸಿದ ರಸಗೊಬ್ಬರದ ಮೌಲ್ಯ ರೂ. 1 ಕೋಟಿಯಿಂದ ರೂ. 15 ಕೋಟಿಗೆ ಏರಿತು. ಈ ಸಂಸ್ಥೆಗಳು ಮಾರಾಟ ಮಾಡಿದ ಕೃಷಿ ಉತ್ಪನ್ನ 1956–57ರಿಂದ 1972–73ರ ಅವಧಿಯಲ್ಲಿ ರೂ. 2.20 ಕೋಟಿಯಿಂದ ರೂ.70ಕೋಟಿಗೆ ಏರಿತು. ಅನುಭೋಗಿ ಸರಕುಗಳ ಮಾರಾಟ ರೂ. 3 ಕೋಟಿಯಿಂದ 15 ಕೋಟಿಗೆ ಏರಿತು. ಈ ಹಲವು ಬಗೆಯ ಚಟುವಟಿಕೆಗಳಿಂದ ಕರ್ನಾಟಕ ರಾಜ್ಯ ಇಂದು ರಾಷ್ಟ್ರದಲ್ಲಿ 'ಸಹಕಾರ' ದೃಷ್ಟಿಯಿಂದ ಅಭಿವೃದ್ಧಿಯಾಗಿದೆ ಎಂದು ಪರಿಗಣಿಸಲ್ಪಟ್ಟಿದೆ.

ಕೃಷಿಕರ ಅಗತ್ಯವನ್ನು ಪೂರೈಸುವುದಕ್ಕಾಗಿ ಪ್ರಾಥಮಿಕ ಸಹಕಾರಿ ಉದರಿ ಸಂಸ್ಥೆಗಳು ಅಲ್ಪಾವಧಿಯ ಸಾಲವನ್ನು ನಗದು ರೂಪದಲ್ಲಿ ಮತ್ತು ಸರಕು ರೂಪದಲ್ಲಿ ಪೂರೈಸುತ್ತಿವೆ. ವಾಣಿಜ್ಯ ಬೆಳೆಗಳನ್ನು ಬೆಳೆಯುವುದಕ್ಕಾಗಿ ಅಗತ್ಯವಾದ ಉದರಿಯ ಗಾತ್ರವನ್ನು ನಿರ್ಧರಿಸಲು ಸರ್ವೇಸಾಮಾನ್ಯವಾಗಿ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ಪ್ರತಿವರ್ಷವೂ ತಾಂತ್ರಿಕ ಸಮಿತಿಗಳನ್ನು ನೇಮಿಸುತ್ತವೆ. ಪ್ರಾಥಮಿಕ ಕೃಷಿ ಉದರಿ ಸಹಕಾರಿ ಸಂಸ್ಥೆಗಳ ಹಣಕಾಸು ಸೌಲಭ್ಯವನ್ನು ಹೆಚ್ಚಿಸಲು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು ರಾಜ್ಯ ಸರ್ಕಾರ, ಅಪೆಕ್ಸ್ ಬ್ಯಾಂಕು ಮತ್ತು ರಿಸರ್ವ್ ಬ್ಯಾಂಕುಗಳಿಂದ ನೆರವನ್ನು ಪಡೆಯುತ್ತದೆ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ದುರ್ಬಲವಾಗಿರುವ ಜಿಲ್ಲೆಗಳಲ್ಲಿ ಪ್ರಾಥಮಿಕ ಸಹಕಾರಿ ಸಂಸ್ಥೆಗಳ ಅಗತ್ಯವನ್ನು ವಾಣಿಜ್ಯ ಬ್ಯಾಂಕುಗಳು ಪೂರೈಸುತ್ತಿವೆ. 1972ರ ವರೆಗೆ ನಮ್ಮ ರಾಜ್ಯದಲ್ಲಿ 919 ಸಂಸ್ಥೆಗಳನ್ನು ವಾಣಿಜ್ಯ ಬ್ಯಾಂಕುಗಳಿಗೆ ವಹಿಸಲಾಗಿದೆ. ಜನವರಿ 1972ರ ಕೊನೆಯ ವೇಳೆಗೆ ಸುಮಾರು 665 ಸಂಸ್ಥೆಗಳು ವಾಣಿಜ್ಯ ಬ್ಯಾಂಕುಗಳಿಂದ ಸುಮಾರು ರೂ. 173.08ಕೋಟಿಯ ನೆರವನ್ನು ಪಡೆದುವು. 1974–75ರ ಅವಧಿಯಲ್ಲಿ ಸುಮಾರು ರೂ. 50 ಕೋಟಿಯನ್ನು 19 ಜಿಲ್ಲಾಮಟ್ಟ ಸಹಕಾರಿ ಬ್ಯಾಂಕುಗಳಿಗೆ ಸೇರಿದ 6,253 ಪ್ರಾಥಮಿಕ ಸಂಸ್ಥೆಗಳಿಗೆ ನೀಡಲಾಯಿತು.

ಕೃಷಿಕರ ಉತ್ಪಾದನ ಸಾಮರ್ಥ್ಯವನ್ನು ಹೆಚ್ಚಿಸಲು ಮತ್ತು ಸಂಪನ್ಮೂಲಗಳ ಸೂಕ್ತ ಬಳಕೆಯನ್ನು ಉತ್ತೇಜಿಸುವುದಕ್ಕಾಗಿ ಪ್ರಾಥಮಿಕ ಕೃಷಿ ಉದರಿ ಸಹಕಾರಿ ಸಂಸ್ಥೆಗಳು ಮಧ್ಯಮಾವಧಿ ಸಾಲವನ್ನೂ ಪೂರೈಸುತ್ತಿವೆ. ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕುಗಳು ಪಶುಸಂಗೋಪನೆ, ಕೋಳಿ ಸಾಕಣೆ, ಪಂಪ್‌ಸೆಟ್‌ಗಳ ಬಳಕೆ ಮುಂತಾದ ಉದ್ದೇಶಗಳಿಗಾಗಿ ಸಾಲ ಹಣವನ್ನು ಪೂರೈಸುತ್ತಿವೆ. ಪ್ರಾಥಮಿಕ ಸಂಘಗಳು ಡಿಸೆಂಬರ್ 1971ರ ವರೆಗೆ ರೂ. 3.71 ಕೋಟಿಯನ್ನು ಸುಮಾರು 17,202 ಪಂಪ್‌ಸೆಟ್‌ಗಳ ಸ್ಥಾಪನೆಗಾಗಿ ನೀಡಿದುವು. ಕೃಷಿ ಉತ್ಪಾದನೆಯ ವೃದ್ಧಿಗಾಗಿ ರಸಗೊಬ್ಬರ, ಕೀಟನಾಶಕಗಳು, ಉತ್ತಮ ತಳಿಯ ಬಿತ್ತನೆ ಬೀಜ ಮುಂತಾದುವುಗಳನ್ನು ಈ ಸಂಘಗಳು ರೈತಾಪಿ ವರ್ಗಕ್ಕೆ ಪೂರೈಸುತ್ತಿವೆ.

ಸಹಕಾರಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಕರ್ನಾಟಕ ಅಪೆಕ್ಸ್ ಬ್ಯಾಂಕು ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು 1974–75ರಿಂದ 1977–78ರ ಅವಧಿಯಲ್ಲಿ ಕೃಷಿ ಅಭಿವೃದ್ಧಿಗಾಗಿ ನೀಡಲಾದ ಉದರಿ ಮೊತ್ತ ಮತ್ತು ಅವು ಗ್ರಾಮೀಣ ಜನತೆಯಿಂದ ಸಂಗ್ರಹಿಸಿದ ಠೇವಣಿ ಹಣದ ಮೊಬಲಗನ್ನು ಕೋಷ್ಟಕ 1ರಲ್ಲಿ ಕೊಡಲಾಗಿದೆ.

---

[2] ಒ. ಡಿ. ಹೆಗ್ಗಡೆ; ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು; 'ಉದಯರವಿ' ಸಂಪುಟ 1; ಸಂಚಿಕೆ 17; ಮಂಡ್ಯ: 30-5-1976; ಪುಟ 2.

ಕೋಷ್ಟಕ 1

**ಕರ್ನಾಟಕದ ಬ್ಯಾಂಕುಗಳ ಕಛೇರಿಗಳ ಸಂಖ್ಯೆ, ಠೇವಣಿಗಳು ಮತ್ತು ಉದರಿ ಹಣ: ಕರ್ನಾಟಕ**
(1974–75ರಿಂದ 1977–78ರ ವರೆಗೆ) (ಲಕ್ಷ ರೂ.ಗಳಲ್ಲಿ)

| ವರ್ಷಗಳು | | ಅಪೆಕ್ಸ್ ಬ್ಯಾಂಕು | | | ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು | |
|---|---|---|---|---|---|---|
| | ಸಂಖ್ಯೆ | ಠೇವಣಿಗಳು | ಉದರಿ ಹಣ | ಸಂಖ್ಯೆ | ಠೇವಣಿಗಳು | ಉದರಿ ಹಣ |
| 1974–75 .. | 1 | 2,398.16 | 5,199.96 | 19 | 4,676.82 | 9,863.31 |
| 1975–76 .. | 1 | 2,691.05 | 5,315.89 | 19 | 4,846.51 | 10,496.12 |
| 1976–77 .. | 1 | 2,958.01 | 7,519.35 | 19 | 5,372.70 | 13,206.82 |
| 1977–78 (ಪು) .. | 3 | 3,142.43 | 8,968.35 | 19 | 7,558.85 | 15,684.02 |

ವಿ.ಸೂ. : ಶಾಖಾ ಕಛೇರಿಗಳಿಗೆ ಸಂಬಂಧಿಸಿದ ಅಂಕಿ-ಅಂಶಗಳು ಈ ಪಟ್ಟಿಯಲ್ಲಿ ಸೇರಿಲ್ಲ.

ಮೂಲ : ಅಂಕಿ-ಅಂಶ ಪಟ್ಟಿ 18.2: ಕರ್ನಾಟಕದ ಅಂಕಿ-ಅಂಶ ರೂಪರೇಷೆ, 1977–78; ಅರ್ಥಶಾಸ್ತ್ರ ಮತ್ತು ಸಂಖ್ಯಾಶಾಸ್ತ್ರ ಬ್ಯೂರೋ; ಕರ್ನಾಟಕ ಸರ್ಕಾರ, ಬೆಂಗಳೂರು: 1979, ಪು. 135 ಮತ್ತು 136

(ಪು)—ಪುನರ್ವಿಮರ್ಶಿಸಬೇಕಾದ್ದು ಅಥವಾ ತಾತ್ಕಾಲಿಕ

ಕರ್ನಾಟಕ ಅಪೆಕ್ಸ್ ಬ್ಯಾಂಕಿನ ಠೇವಣಿ ಹಣ 1974–75ರಲ್ಲಿ ರೂ. 2,398.16 ಲಕ್ಷ ಇದ್ದದ್ದು 1977–78ರಲ್ಲಿ ರೂ. 3,142.43 ಲಕ್ಷ ರೂ.ಗಳಿಗೆ ಹೆಚ್ಚಳವಾಯಿತು. ಅಂತೆಯೇ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳ ಠೇವಣಿ ಹಣ 1974–75 ಮತ್ತು 1977–78ರ ಅವಧಿಯಲ್ಲಿ ರೂ. 4,676.82 ಲಕ್ಷದಿಂದ ರೂ. 7,558.85 ಲಕ್ಷಕ್ಕೆ ಹೆಚ್ಚಳವಾಯಿತು. ಸಹಕಾರಿ ಬ್ಯಾಂಕುಗಳು ಠೇವಣಿ ಸಂಗ್ರಹಿಸುವ ಕ್ರಿಯೆಯಲ್ಲಿ ಅಭಿವೃದ್ಧಿ ಹೊಂದುತ್ತಿರುವುದನ್ನು ಈ ಅಂಕಿ-ಅಂಶಗಳಿಂದ ಗಮನಿಸಬಹುದು. ರಾಜ್ಯಮಟ್ಟದ ಅಪೆಕ್ಸ್ ಬ್ಯಾಂಕು 1974–75ರಿಂದ 1977–78ರವರೆಗಿನ ಅವಧಿಯಲ್ಲಿ ನೀಡಿದ ಉದರಿಯಲ್ಲಿ ರೂ. 5,199.96 ಲಕ್ಷದಿಂದ ರೂ. 8,968.35 ಲಕ್ಷಕ್ಕೆ ಏರಿಕೆಯಾಗಿದೆ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ನೀಡಿದ ಉದರಿ 1974–75ರಿಂದ 1977–78ರ ವರೆಗಿನ ಅವಧಿಯಲ್ಲಿ ರೂ. 9,863.31 ಲಕ್ಷದಿಂದ ರೂ. 15,684.02 ಲಕ್ಷಕ್ಕೆ ಏರಿಕೆಯಾಗಿದೆ. ಅಪೆಕ್ಸ್ ಬ್ಯಾಂಕು ಮತ್ತು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ಸಾಲಹಣ ನೀಡಿಕೆಯಲ್ಲಿ ಗಣನೀಯ ಪ್ರಗತಿ ಸಾಧಿಸಿರುವುದನ್ನು ಈ ಅಂಕಿ-ಅಂಶಗಳಿಂದ ಗಮನಿಸಬಹುದಾಗಿದೆ.

### ಭೂ ಅಭಿವೃದ್ಧಿ ಬ್ಯಾಂಕುಗಳು

ಕೃಷಿಯ ಶೀಘ್ರತಮ ಅಭಿವೃದ್ಧಿ ಮತ್ತು ಆಧುನೀಕರಣಕ್ಕೆ ದೀರ್ಘಾವಧಿ ಸಾಲದ ಅಗತ್ಯ ಅಪರಿಮಿತವಾಗಿದೆ. ಈ ಅಗತ್ಯವನ್ನು ನಮ್ಮ ದೇಶದಲ್ಲಿ ಮತ್ತು ಕರ್ನಾಟಕ ರಾಜ್ಯದಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳು ಪೂರೈಸುತ್ತಿವೆ. ಭೂ ಅಭಿವೃದ್ಧಿ ಬ್ಯಾಂಕುಗಳು ತೋಟಗಾರಿಕೆ, ಕೃಷಿ ಯಾಂತ್ರೀಕರಣ, ಭೂ ಅಭಿವೃದ್ಧಿ, ಭೂಸಾರ ಸಂರಕ್ಷಣೆ, ಪಂಪ್‌ಸೆಟ್‌ಗಳ ಸ್ಥಾಪನೆ ಮುಂತಾದ ಉದ್ದೇಶಗಳಿಗಾಗಿ ಸಾಲಹಣವನ್ನು ಪೂರೈಸುತ್ತಿವೆ. ಈ ಸಾಲಹಣದ ಮರುಪಾವತಿ ದೀರ್ಘ ಅವಧಿಯದಾಗಿರುತ್ತದೆ. ಭೂ ಅಭಿವೃದ್ಧಿ ಬ್ಯಾಂಕುಗಳು ರಾಜ್ಯ ಸರ್ಕಾರ, ರಿಸರ್ವ್ ಬ್ಯಾಂಕ್ ಆಫ್ ಇಂಡಿಯ, ವಿಶ್ವ ಬ್ಯಾಂಕು ಮತ್ತು ಕೃಷಿ ಪುನರ್ಧನ ಪೋಷಣಾ ನಿಗಮಗಳ ನೆರವಿನಿಂದ ವಿಪುಲವಾಗಿ ಸಾಲ ಪೂರೈಸುತ್ತಿದೆ.

ಕರ್ನಾಟಕದಲ್ಲಿ 1929ರಲ್ಲಿ ಪ್ರಪ್ರಥಮವಾಗಿ ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕನ್ನು ಮಲೆನಾಡಿನ ರೈತರ ಉದರಿ ಸಮಸ್ಯೆಯನ್ನು ನಿವಾರಿಸಲು ಸ್ಥಾಪಿಸಲಾಯಿತು. 1968ರ ವರೆಗೆ ರಾಜ್ಯದ ಭೂ ಅಭಿವೃದ್ಧಿ ಬ್ಯಾಂಕುಗಳ ಕಾರ್ಯಾಚರಣೆ ಅಷ್ಟೇನೂ ತೃಪ್ತಿಕರವಾಗಿರಲಿಲ್ಲ. ಆರಂಭಿಕ ವರ್ಷಗಳಲ್ಲಿ ಈ ಬ್ಯಾಂಕುಗಳನ್ನು ಭೂ ಅಡಮಾನ ಬ್ಯಾಂಕುಗಳು ಎಂದು ಕರೆಯಲಾಗುತ್ತಿತ್ತು. ಅಭಿವೃದ್ಧಿಗಾಗಿ ಬ್ಯಾಂಕಿಂಗ್ ಹಣಕಾಸು ನೀತಿಯ ವಿಸ್ತೃತ ಅನುಸರಣೆ ಆದಾಗ ಈ ಬ್ಯಾಂಕುಗಳನ್ನು ಭೂ ಅಭಿವೃದ್ಧಿ ಬ್ಯಾಂಕುಗಳೆಂದು ನಾಮಕರಣ ಮಾಡಲಾಯಿತು. ಅಂತೆಯೇ ಅವುಗಳ ಕಾರ್ಯಾಚರಣೆಯ ವಿಧಾನವೂ ಬದಲಾಯಿತು. 1968–75ರಲ್ಲಿ ಕರ್ನಾಟಕದ ಭೂ ಅಭಿವೃದ್ಧಿ ಬ್ಯಾಂಕುಗಳು ಸುಮಾರು ರೂ. 100 ಕೋಟಿಯ ದೀರ್ಘಕಾಲೀನ ಸಾಲಹಣವನ್ನು ಕೃಷಿಕ್ಷೇತ್ರಕ್ಕೆ ಪೂರೈಸಿವೆ. ಸಣ್ಣ ನೀರಾವರಿ ಬಾವಿಗಳಿಗಾಗಿ 1975ರ ಸಮಯಕ್ಕೆ ಈ ಬ್ಯಾಂಕುಗಳು ಪೂರೈಸಿದ ಹಣಕಾಸು ಸೌಲಭ್ಯ ಸುಮಾರು ಒಂದು ಲಕ್ಷ ರೂಪಾಯಿ. ಕರ್ನಾಟಕದಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳು ಕೃಷಿಗೆ ನೀಡಿರುವ ಕೊಡುಗೆಯನ್ನು ಕೋಷ್ಟಕ 2ರಲ್ಲಿ ನೋಡಬಹುದು.

ಕೋಷ್ಟಕ 2

ಭೂ ಅಭಿವೃದ್ಧಿ ಬ್ಯಾಂಕು ಮತ್ತು ಸಂಸ್ಥೆಗಳು ಕೃಷಿ ಅಭಿವೃದ್ಧಿಗಾಗಿ ನೀಡಿದ ಸಾಲಸೌಲಭ್ಯದ ವಿವರ

| | ರಾಜ್ಯಕ್ಕೆ ಸಂಬಂಧಿಸಿದ ಅಂಕಿ-ಅಂಶಗಳು | ಭೂ ಅಭಿವೃದ್ಧಿ ಬ್ಯಾಂಕುಗಳ ಕಾಣಿಕೆ |
|---|---|---|
| 1 ಬಾವಿಗಳು | 3.28 ಲಕ್ಷ | 1.10 ಲಕ್ಷ |
| 2 ಟ್ರ್ಯಾಕ್ಟರುಗಳು | 8,500 | 3,350 |
| 3 ವಿದ್ಯುಚ್ಛಕ್ತಿಯ ಐ.ಪಿ. ಸೆಟ್ಟುಗಳು | 2.25 ಲಕ್ಷ | 30,000 |
| 4 ತೆಂಗು ಬೇಸಾಯ | 4,15,000 ಎಕರೆಗಳು | 45,000 ಎಕರೆಗಳು |
| 5 ಬಿತ್ತನೆ ಮಾಡಲಾದ ನಿವ್ವಳ ಪ್ರದೇಶ | 103.31 ಲಕ್ಷ ಎಕರೆಗಳು | 8 ಲಕ್ಷ ಎಕರೆಗಳು |

ರಾಜ್ಯಕ್ಕೆ ಸಂಬಂಧಿಸಿದ ಅಂಕಿ-ಅಂಶಗಳು ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಸಂಘಗಳು ಮತ್ತು ರಾಜ್ಯ ಸರ್ಕಾರದ ಹಣಕಾಸು ನೆರವಿನಿಂದ ಅಭಿವೃದ್ಧಿಪಡಿಸಲಾದವುಗಳನ್ನು ಸೂಚಿಸುತ್ತದೆ. ಭೂ ಅಭಿವೃದ್ಧಿ ಬ್ಯಾಂಕಿನ ನೆರವಿನೊಡನೆ (ಮೇಲಿನ ಕೋಷ್ಟಕವನ್ನು ನೋಡಿ). ಅಭಿವೃದ್ಧಿಪಡಿಸಲಾದ ಕಾರ್ಯಕ್ರಮಗಳು ರಾಜ್ಯದಲ್ಲಿ ಕೃಷಿ ಉತ್ಪನ್ನವನ್ನು ಸುಮಾರು 35 ಕೋಟಿ ರೂ.ಗಳ ಮೌಲ್ಯದ 3.5 ಲಕ್ಷ ಟನ್ ಆಹಾರ ಧಾನ್ಯಗಳ ಉತ್ಪಾದನೆಯನ್ನು ಸಾಧಿಸಲು 1976–77ರಿಂದೀಚೆಗೆ ನೆರವಾಗಿವೆ.

ಕೋಷ್ಟಕ 3ರಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳ ಕಾರ್ಯಾಚರಣೆಯ ವಿವರಗಳನ್ನು ನೀಡಲಾಗಿದೆ.

ಕೋಷ್ಟಕ 3

ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು, ಕಛೇರಿಗಳ ಸಂಖ್ಯೆ ಮತ್ತು ಸಾಲ ಹಣ
(1973–74ರಿಂದ 1977–78)

| ಕ್ರಮ ಸಂಖ್ಯೆ | ವಿವರಗಳು | 1973–74 | 1974–75 | 1975–76 | 1976–77 | 1977–78(ಪು) |
|---|---|---|---|---|---|---|
| 1 | ಬ್ಯಾಂಕ್ ಕಛೇರಿಗಳು | 175 | 176 | 176 | 176 | 176 |
| 2 | ಸಾಲಹಣ (ಲಕ್ಷ ರೂ.ಗಳಲ್ಲಿ) | | | | | |
| | (ಅ) ಸಾಲಹಣ ನೀಡಿದ್ದು | 1,415.72 | 1,865.84 | 2,200.31 | 2,526.52 | 1,280.68 |
| | (ಆ) ಸಾಲಹಣ ಮರುಪಾವತಿಯಾದದ್ದು | 1,012.94 | 1,122.03 | 1,240.47 | 1,393.00 | 1,650.12 |
| | (ಇ) ಸಾಲಹಣ ಮರುಪಾವತಿಯಾಗಬೇಕಾಗಿರುವುದು | 7,057.71 | 8,192.68 | 9,553.51 | 11,275.54 | 11,714.85 |
| | (ಈ) ಕಾಲಾವಧಿ ಮೀರಿದರೂ ಪಾವತಿಯಾಗದ ಹಣ | 172.91 | 283.13 | 531.34 | 934.93 | 1,079.18 |

ಮೂಲ: ಕರ್ನಾಟಕ ಭೂ ಅಭಿವೃದ್ಧಿ ಬ್ಯಾಂಕು, ಬೆಂಗಳೂರು: ಕರ್ನಾಟಕ ಅಂಕಿ-ಅಂಶ ರೂಪರೇಷೆ 1977–78: ಕರ್ನಾಟಕ ಸರ್ಕಾರ: ಅರ್ಥಶಾಸ್ತ್ರ ಮತ್ತು ಸಂಖ್ಯಾಶಾಸ್ತ್ರ ಬ್ಯೂರೋ, ಬೆಂಗಳೂರು 1979, ಪು. 137

ಕೋಷ್ಟಕ 4

**ಅನುಸೂಚಿತ ವಾಣಿಜ್ಯ ಬ್ಯಾಂಕುಗಳು: ಕಛೇರಿಗಳ ಸಂಖ್ಯೆ, ಠೇವಣಿಗಳು ಮತ್ತು ಸಾಲ ಹಣ**

| ಕ್ರಮ ಸಂಖ್ಯೆ | ವಿವರಗಳು | 1973 | 1974 | 1975 | 1976 | 1977(ಪು) |
|---|---|---|---|---|---|---|
| 1 | ಕಛೇರಿಗಳ ಸಂಖ್ಯೆ | | | | | |
| | (ಅ) ಗ್ರಾಮೀಣ ಪ್ರದೇಶಗಳಲ್ಲಿ .. | 691 | 746 | 801 | 882 | 1,039 |
| | (ಆ) ಅರೆ-ನಗರ ಪ್ರದೇಶಗಳಲ್ಲಿ .. | 451 | 473 | 511 | 545 | 568 |
| | (ಇ) ನಗರ ಪ್ರದೇಶಗಳಲ್ಲಿ .. | 160 | 181 | 204 | 237 | 249 |
| | (ಈ) ನಗರ ಪ್ರದೇಶಗಳಲ್ಲಿ .. | 279 | 300 | 341 | 387 | 422 |
| | ಮೊತ್ತ .. | 1,581 | 1,700† | 1,857† | 2,051† | 2,278 |
| | (ಉ) ಠೇವಣಿಗಳು (ಲಕ್ಷ ರೂ.ಗಳಲ್ಲಿ) .. | 48,836 | 55,683 | 67,088 | 73,875* | 94,302† |
| | (ಊ) ಸಾಲಹಣ (ಲಕ್ಷ ರೂ.ಗಳಲ್ಲಿ) | 42,335 | 52,456 | 67,095 | 76,339* | 66.494† |

†ಪುನರ್ವಿಮರ್ಶಿಸಲಾದ್ದು  ಪು. ಪುನರ್ವಿಮರ್ಶಿಸಬೇಕಾದ್ದು,  *ಕೊನೆಯ ಶುಕ್ರವಾರ, ಜೂನ್ 1976  †ಕೊನೆಯ ಶುಕ್ರವಾರ, ಜೂನ್, 1977

ಮೂಲ: ರಿಸರ್ವ್ ಬ್ಯಾಂಕ್ ಆಫ್ ಇಂಡಿಯ, ಬೆಂಗಳೂರು; ಅಂಕಿ-ಅಂಶ ರೂಪರೇಷೆ, ಕರ್ನಾಟಕ: ಅರ್ಥಶಾಸ್ತ್ರ ಮತ್ತು ಸಂಖ್ಯಾಶಾಸ್ತ್ರ ಬ್ಯೂರೋ; ಕರ್ನಾಟಕ ಸರ್ಕಾರ, ಬೆಂಗಳೂರು, 1979; ಪು. 139

ಕರ್ನಾಟಕದಲ್ಲಿ ಭೂ ಅಭಿವೃದ್ಧಿ ಬ್ಯಾಂಕಿನ ಶಾಖೆಗಳು ಸಮಗ್ರ ರಾಜ್ಯದಲ್ಲಿ ವ್ಯಾಪಿಸಿರುವುದನ್ನು ಮತ್ತು ಮರು ಪಾವತಿಯಾಗಬೇಕಾದ ಹಾಗೂ ಅವಧಿ ಮುಗಿದರೂ ಪಾವತಿಯಾಗದಿರುವ ಸಾಲಹಣ ಕಾಲಾನುಕ್ರಮದಲ್ಲಿ ಹೆಚ್ಚು ತ್ತಿರುವುದನ್ನು ಕೋಷ್ಟಕ 3ರಲ್ಲಿ ಕಾಣಬಹುದು. ಪರಿ ಣಾಮವಾಗಿ ಭೂ ಅಭಿವೃದ್ಧಿ ಬ್ಯಾಂಕು ರೈತರಿಗೆ ವರ್ಷಂಪ್ರತಿ ಪೂರೈಸಬಹುದಾದ ಸಾಲಹಣ ಸೌಲಭ್ಯ ಸೀಮಿತವಾದು ದಾಗಿದೆ.

ಕರ್ನಾಟಕ ಭೂ ಅಭಿವೃದ್ಧಿ ಬ್ಯಾಂಕು ರಾಜ್ಯದ ದುರ್ಬಲ ವರ್ಗಗಳಿಗೆ ಹಣಕಾಸು ನೆರವನ್ನು ಪೂರೈಸುವಲ್ಲಿ ಕ್ರಿಯಾ ಶೀಲವಾಗಿದೆ. ದುರ್ಬಲ ವರ್ಗಗಳಿಗೆ ನೀಡಿರುವ ಸೌಲಭ್ಯ ಗಣನೀಯವಾಗಿದೆ. ಉದಾಹರಣೆಗೆ ಭೂ ಅಭಿವೃದ್ಧಿ ಬ್ಯಾಂಕು ಜೂನ್ 30, 1975ರ ವೇಳೆಗೆ 1 ಲಕ್ಷ ಸಣ್ಣ ರೈತರಿಗೆ ರೂ. 32 ಲಕ್ಷವನ್ನು ಸಾಲವಾಗಿ ನೀಡಿದೆ ಹಾಗೂ ಜೂನ್ 30, 1975ರ ವೇಳೆಗೆ ಈ ಬ್ಯಾಂಕು ಸುಮಾರು 25,000 ಮಂದಿ ಅನುಸೂಚಿತ ಜಾತಿ/ವರ್ಗಗಳಿಗೆ ಸೇರಿದ ಜನರಿಗೆ ಸುಮಾರು ರೂ. 10 ಕೋಟಿಯ ಸಾಲ ನೀಡಿದೆ. ಕರ್ನಾಟಕ ಭೂ ಅಭಿವೃದ್ಧಿ ಬ್ಯಾಂಕು 1972ರಲ್ಲಿ ಕೈ ಗೊಂಡ ಮೈಸೂರು ಕೃಷಿ ಉದರಿ ಯೋಜನೆಗೆ 1975ರ ವೇಳೆಗೆ ನಿಗದಿತ ರೂ. 42.86 ಕೋಟಿಯಲ್ಲಿ ಸುಮಾರು ರೂ. 39 ಕೋಟಿಯನ್ನು ವಿತರಿಸಿದ್ದಿತು. ಈ ಯೋಜನೆ ಸುಮಾರು 36,000 ಕೃಷಿಕ ಕುಟುಂಬಗಳಿಗೆ ನೆರವನ್ನು ನೀಡಿದ್ದಲ್ಲದೆ, 40,000 ಜನರಿಗೆ ಉದ್ಯೋಗ ಕಲ್ಪಿಸಿತು. ಹೀಗೆ ಕರ್ನಾಟಕ ಭೂ ಅಭಿವೃದ್ಧಿ ಬ್ಯಾಂಕು ಅಭಿವೃದ್ಧಿ ಪ್ರೇರಿತ ಹಣಕಾಸು ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದೆ.

**ವಾಣಿಜ್ಯ ಬ್ಯಾಂಕುಗಳು**

ವಾಣಿಜ್ಯ ಬ್ಯಾಂಕುಗಳು ಕರ್ನಾಟಕ ರಾಜ್ಯದ ಗ್ರಾಮೀಣ ಅಭಿವೃದ್ಧಿಯಲ್ಲಿ ಮಹತ್ತರವಾದ ಪಾತ್ರ ವಹಿಸುತ್ತಿವೆ. ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು ಮತ್ತು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಮತ್ತು ಅದರ ಒಕ್ಕೂಟದ ಸದಸ್ಯ ಬ್ಯಾಂಕುಗಳು ಈ ದಿಸೆಯಲ್ಲಿ ಪ್ರಶಂಸಾರ್ಹವಾದ ದಿಟ್ಟ ಹೆಜ್ಜೆ ಇಟ್ಟಿವೆ.

ಗ್ರಾಮೀಣ ಪ್ರದೇಶಗಳಲ್ಲಿ ಶಾಖೆಗಳನ್ನು ತೆರೆಯುವಿಕೆ, ಠೇವಣಿ ಸಂಗ್ರಹ, ಬ್ಯಾಂಕಿಂಗ್ ಅಭ್ಯಾಸದ ಪ್ರಸರಣ, ಕೃಷಿ ಸಂಘಗಳನ್ನು ಬಲಪಡಿಸುವಿಕೆ, ಉದರಿ ನೀಡಿಕೆ ಮತ್ತು ಕೃಷಿ ಸೇವಾ ಸಂಘಗಳನ್ನು ಅಭಿವೃದ್ಧಿ ಪಡಿಸುವಿಕೆ ಹಾಗೂ ಗ್ರಾಮೀಣ ಬ್ಯಾಂಕುಗಳ ಅಭಿವೃದ್ಧಿ—ಇವೇ ಮುಂತಾದ ಕ್ಷೇತ್ರಗಳಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು ಸಫಲತೆ ಕಾಣುತ್ತಿವೆ.

ವಾಣಿಜ್ಯ ಬ್ಯಾಂಕುಗಳ ಶಾಖಾ ವಿಸ್ತರಣೆ, ಠೇವಣಿ ಸಂಗ್ರಹ ಮತ್ತು ಉದರಿ ನೀಡಿಕೆಗೆ ಸಂಬಂಧಿಸಿದ ಮಾಹಿತಿ ಯನ್ನು ಕೋಷ್ಟಕ 4ರಲ್ಲಿ ನೀಡಲಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕ್ ಶಾಖೆ ತೆರೆಯುವುದರ ಬಗೆಗೆ ಸಾಕಷ್ಟು ಯಶಸ್ಸನ್ನು ಅನುಸೂಚಿತ (ಷೆಡ್ಯೂಲ್ಡ್) ಬ್ಯಾಂಕು ಗಳು ಸಾಧಿಸಿವೆ ಎಂಬ ಅಂಶ ಈ ಕೋಷ್ಟಕದಿಂದ ವ್ಯಕ್ತ ವಾಗುವುದು.

ಕರ್ನಾಟಕ ರಾಜ್ಯ ಇಂದಿಗೂ ಕೃಷಿಪ್ರಧಾನ ರಾಜ್ಯ ವಾಗಿದೆ. ವಾಣಿಜ್ಯ ಬ್ಯಾಂಕುಗಳು ಕೃಷಿ ಮತ್ತು ಇತರ ಆದ್ಯತಾ ಕ್ಷೇತ್ರಗಳಿಗೆ ನೀಡುತ್ತಿರುವ ಸಾಲಹಣದ ವಿವರ ವನ್ನು ಕೋಷ್ಟಕ 5ರಲ್ಲಿ ನೀಡಲಾಗಿದೆ. ಕೈಗಾರಿಕಾಭಿವೃದ್ಧಿ ಯನ್ನು ಆಧರಿಸಿ ಬೆಳವಣಿಗೆಯಾಗಿರುವ ನಗರ ಪ್ರದೇಶಗಳು ಕರ್ನಾಟಕದಲ್ಲಿ ಕೆಲವೇ ಕೆಲವು. ಬಹುತೇಕ ಸಣ್ಣ ಮತ್ತು ಮಧ್ಯಮ ಗಾತ್ರದ ನಗರ ಪ್ರದೇಶಗಳು ಕೃಷಿ ಮತ್ತು ವಾಣಿಜ್ಯವನ್ನೇ ಆಧರಿಸಿರುವುದರಿಂದ ವಾಣಿಜ್ಯ ಬ್ಯಾಂಕು ಗಳು ಆದ್ಯತಾ ಕ್ಷೇತ್ರಕ್ಕೆ ನೀಡುತ್ತಿರುವ ಸಾಲಹಣ ವಿವರ ಗಳನ್ನು ಈ ಲೇಖನದಲ್ಲಿ ಅಳವಡಿಸಿಕೊಳ್ಳಲಾಗಿದೆ.

**ಕೋಷ್ಟಕ 5**

ಆದ್ಯತಾ ಕ್ಷೇತ್ರಗಳಿಗೆ ಅನುಸೂಚಿತ ವಾಣಿಜ್ಯ ಬ್ಯಾಂಕುಗಳು ನೀಡಿದ ಉದರಿ (ಕೋಟಿ ರೂ.ಗಳಲ್ಲಿ)

| | | | 1972 (ಡಿಸೆಂಬರ್) | 1973 (ಡಿಸೆಂಬರ್) | 1974 (ಜೂನ್) | 1975 (ಡಿಸೆಂಬರ್) |
|---|---|---|---|---|---|---|
| 1 | ಕೃಷಿ (ಪ್ರತ್ಯಕ್ಷ ಮತ್ತು ಪರೋಕ್ಷ ಹಣಕಾಸು) | .. | 30.27 | 40.37 | 43.11 | 113.45 |
| 2 | ಸಣ್ಣ ಗಾತ್ರದ ಕೈಗಾರಿಕೆಗಳು | .. | 42.40 | 57.82 | 63.37 | 99.02 |
| 3 | ಸಾಗಣೆ | .. | 7.73 | 11.84 | 12.64 | 4.4 |
| 4 | ಚಿಲ್ಲರೆ ವ್ಯಾಪಾರ | .. | 17.17 | 21.87 | 21.53 | 25.27 |
| 5 | ವೃತ್ತಿನಿರತರು ಮತ್ತು ಸ್ವ-ಉದ್ಯೋಗಿಗಳು | .. | 12.42 | 10.64 | 19.73 | 8.19 |
| 6 | ಇತರೆ | .. | .. | .. | .. | 21.38* |
| | ಒಟ್ಟು | .. | 109.99 | 151.54 | 160.38 | 267.31 |

*ಸಾಗಣೆ, ಶಿಕ್ಷಣ ಮತ್ತು ರಫ್ತು ಕ್ಷೇತ್ರಕ್ಕೆ ನೀಡಲಾದ ಸಾಲಹಣವನ್ನೂ ಒಳಗೊಂಡಿದೆ

ಮೂಲ: ಕರ್ನಾಟಕದ ಅಭಿವೃದ್ಧಿ ಹಣಕಾಸು—ಒಂದು ದಶಕದ ಯೋಜನಾ ವಿಭಾಗ: ಕರ್ನಾಟಕ ಸರ್ಕಾರ, ಬೆಂಗಳೂರು, 1976; ಪುಟ 41

ಅನುಸೂಚಿತ ವಾಣಿಜ್ಯ ಬ್ಯಾಂಕುಗಳು ಹಿಂದುಳಿದ ಮತ್ತು ಅಭಿವೃದ್ಧಿ ಹೊಂದಿದ ಪ್ರದೇಶಗಳ ವಿವಿಧ ಕ್ಷೇತ್ರಗಳಿಗೆ ನೀಡಿದ ಉದರಿ ಪರಿಮಾಣ ಗಮನಾರ್ಹ ವಾದುದಾಗಿದೆ. ಕರ್ನಾಟಕದ ಪ್ರದೇಶಗಳನ್ನು ಕೈಗಾರಿಕಾಭಿ ವೃದ್ಧಿಯನ್ನು ಆಧರಿಸಿ ಅಭಿವೃದ್ಧಿ ಹೊಂದಿದ ಮತ್ತು ಹಿಂದುಳಿದ ಪ್ರದೇಶಗಳು ಎಂದು ವರ್ಗೀಕರಿಸಲಾಗಿದೆ. ಈ ದಿಸೆಯಲ್ಲಿ ವಾಣಿಜ್ಯ ಬ್ಯಾಂಕುಗಳು ಸಾಧಿಸಿರುವ ಪ್ರಗತಿ ಪ್ರಶಂಸಾರ್ಹವಾಗಿದೆ. ಈ ವಿವರಗಳನ್ನು ಕೋಷ್ಟಕ 6ರಲ್ಲಿ ಗಮನಿಸಬಹುದಾಗಿದೆ.

ಕೋಷ್ಟಕ 6

ಉದರಿಯ ಪ್ರದೇಶಾನುಗುಣ ಕ್ಷೇತ್ರೀಯ ಪಂಚಿಕೆ:ಕರ್ನಾಟಕ (ಡಿಸೆಂಬರ್ 1975) (ಸೇಕಡಾವಾರು)

| ಕ್ಷೇತ್ರಗಳು | ಹಿಂದುಳಿದ ಪ್ರದೇಶಗಳು | ಅಭಿವೃದ್ಧಿ ಹೊಂದಿದ ಪ್ರದೇಶಗಳು |
|---|---|---|
| ಕೃಷಿ | 56.9 | 43.1 |
| ಕೈಗಾರಿಕೆ | 23.6 | 76.4 |
| ವಾಣಿಜ್ಯ | 25.5 | 74.5 |
| ವೈಯಕ್ತಿಕ ಸಾಲಗಳು | 30.5 | 69.5 |
| ಇತರ | 4.9 | 95.1 |
| ಒಟ್ಟು | 30.8 | 69.2 |
| ಇದರಲ್ಲಿ ಕೈಗಾರಿಕಾ ಕ್ಷೇತ್ರದ ಪಾಲು | 19.1 | 80.9 |

ಮೂಲ: ಬ್ಯಾಂಕಿಂಗ್ ಅಂಕಿ-ಅಂಶಗಳು: ಮೂಲಭೂತ ಅಂಕಿ-ಅಂಶ ರವಾನೆ—ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಬುಲೆಟಿನ್, ಮುಂಬಯಿ

ವಾಣಿಜ್ಯ ಬ್ಯಾಂಕುಗಳು ಜನತೆಗೆ ನೀಡುತ್ತಿರುವ ಬ್ಯಾಂಕಿಂಗ್ ಸೌಲಭ್ಯ, ಉದರಿ ಸೌಲಭ್ಯಗಳು ಪ್ರತಿ ಶಾಖೆಗೂ ವಿಸ್ತೃತವಾಗಿದೆ. ಅಂತೆಯೇ ಪ್ರತಿ ಶಾಖೆಯೂ ಸಂಗ್ರಹಿಸು ತ್ತಿರುವ ಠೇವಣಿ ಮೊತ್ತದಲ್ಲೂ ಏರಿಕೆಯಾಗಿದೆ. ಈ ವಿವರಗಳನ್ನು ಕೋಷ್ಟಕ 7ರಲ್ಲಿ ಗಮನಿಸಬಹುದಾಗಿದೆ.

ಕೋಷ್ಟಕ 7

ಗ್ರಾಮೀಣ ಕ್ಷೇತ್ರದಲ್ಲಿ ಬ್ಯಾಂಕುಗಳ ಕಾರ್ಯಾಚರಣೆ

| | ಜೂನ್ 1969 | ಡಿಸೆಂಬರ್ 1977 |
|---|---|---|
| ಪ್ರತಿ ಶಾಖೆ: ಠೇವಣಿ (ಲಕ್ಷ ರೂ.ಗಳಲ್ಲಿ) | 11.2 | 16.0 |
| ಪ್ರತಿ ಶಾಖೆ: ಉದರಿ (ಲಕ್ಷ ರೂ.ಗಳಲ್ಲಿ) | 4.9 | 13.5 |
| ಉದರಿ-ಠೇವಣಿ ಪ್ರಮಾಣ (ಸೇಕಡಾವಾರು) | 43.5 | 84.1 |
| ಪ್ರತಿ ಶಾಖೆ: ಜನಸಂಖ್ಯೆ (ಸಾವಿರಗಳಲ್ಲಿ) | 119.0 | 22.0 |

ಮೂಲ—ಬಿ. ಬಿ. ಶೆಟ್ಟಿ; ರೂರಲ್ ಬ್ಯಾಂಕಿಂಗ್, ದಿ ಇಕನಾಮಿಕ್ ಸೀನ್; ಸಂಪುಟ IV: ಸಂಚಿಕೆ 9; ಮುಂಬಯಿ, ಸೆಪ್ಟೆಂಬರ್ 1979; ಪು. 41

ಒಟ್ಟಾರೆ ವಾಣಿಜ್ಯ ಬ್ಯಾಂಕುಗಳ ಕಾರ್ಯಾಚರಣೆ ಸಮಾಧಾನಕರವಾಗಿದ್ದರೂ ಅನೇಕ ಬ್ಯಾಂಕಿಂಗ್ ಅಭಿವೃದ್ಧಿ ವಿವರ ಗಳನ್ನು ಗ್ರಾಮೀಣ-ನಗರ ಪ್ರದೇಶಗಳ ನಡುವಣ ಹೋಲಿಕೆಗಾಗಿ ಬಳಸಿದಾಗ ಅನೇಕ ಕುತೂಹಲಕಾರಿ ಅಂಶ ಗಳು ಬೆಳಕಿಗೆ ಬರುವುವು, ಕೋಷ್ಟಕ 8 ಈ ಅಂಶಗಳನ್ನು ವಿವರಿಸುತ್ತದೆ. ವಾಣಿಜ್ಯ ಬ್ಯಾಂಕುಗಳ ಕಾರ್ಯಾಚರಣೆ ಕರ್ನಾಟಕದಲ್ಲಿ ಇನ್ನೂ ನಗರಪ್ರೇರಿತವೂ ನಗರಪ್ರಧಾನವೂ ಆಗಿರುವುದು ಕೋಷ್ಟಕ 8ರಿಂದ ವ್ಯಕ್ತವಾಗುತ್ತದೆ.

ಬ್ಯಾಂಕಿಂಗ್ ಅಭಿವೃದ್ಧಿ ಗ್ರಾಮೀಣ ಮತ್ತು ನಗರ ಪ್ರದೇಶಗಳ ನಡುವೆ ಅಸಮತೋಲದಿಂದ ಕೂಡಿದೆ. ಗ್ರಾಮದಲ್ಲಿ ಪ್ರತಿ 26,000 ಜನರಿಗೆ ಒಂದು ಬ್ಯಾಂಕಿಂಗ್ ಶಾಖೆ ಇದ್ದರೆ ಅರೆ-ನಗರ, ನಗರ ಮತ್ತು ಬೃಹತ್ ನಗರ ಪ್ರದೇಶಗಳಲ್ಲಿ ಅನುಕ್ರಮವಾಗಿ 6, 7 ಮತ್ತು 5 ಸಾವಿರ ಜನರಿಗೆ ಒಂದೊಂದರಂತೆ ಬ್ಯಾಂಕ್ ಶಾಖೆಗಳಿವೆ. ಅಂತೆಯೇ ಗ್ರಾಮ ಪ್ರದೇಶದಲ್ಲಿ ತಲಾವಾರು ಠೇವಣಿ ರೂ. 59.2 ಇದ್ದರೆ ಅರೆ-ನಗರ, ನಗರ ಮತ್ತು ಬೃಹತ್ ನಗರಪ್ರದೇಶ ಗಳಲ್ಲಿ ಅನುಕ್ರಮವಾಗಿ ರೂ. 630.7, ರೂ. 1,045.9, ರೂ. 2,037.7 ಠೇವಣಿಗಳಿವೆ. ತಲಾವಾರು ಉದರಿ ನೀಡಿಕೆ ಗ್ರಾಮೀಣ ಪ್ರದೇಶದಲ್ಲಿ ರೂ. 57.5 ಆಗಿದ್ದರೆ, ಅರೆ-ನಗರ, ನಗರ ಮತ್ತು ಬೃಹತ್ ನಗರ ಪ್ರದೇಶಗಳಲ್ಲಿ ರೂ. 525.6, ರೂ. 752.2 ಮತ್ತು ರೂ. 2,508.6

ಕೋಷ್ಟಕ 8

ವಾಣಿಜ್ಯ ಬ್ಯಾಂಕುಗಳ ಜನಸಂಖ್ಯಾಧಾರಿತ ಕಾರ್ಯಾಚರಣೆ: ಕರ್ನಾಟಕ (ಡಿಸೆಂಬರ್ 1976)

| ವಿವರಗಳು | ಗ್ರಾಮೀಣ | ಅರೆ-ನಗರ | ನಗರ | ಬೃಹನ್ನಗರ | ಒಟ್ಟು |
|---|---|---|---|---|---|
| ಠೇವಣಿಗಳು (ಲಕ್ಷ ರೂ.) .. | 13,326 | 19,905 | 20.704 | 33,703 | 87,674 |
| ಸಾಲಹಣ ನೀಡಿಕೆ (ಲಕ್ಷ ರೂ.) .. | 12,937 | 16,587 | 14,916 | 41,493 | 85,933 |
| ಶಾಖೆಗಳು (ಸಂಖ್ಯೆ) .. | 872 | 554 | 295 | 328 | 2,049 |
| ಸಾಲ ಹಣ-ಠೇವಣಿ ಪ್ರಮಾಣ (ಸೇಕಡ) .. | 97.1 | 83.3 | 71.9 | 123.1 | 98.0 |
| ಪ್ರತಿ ಶಾಖೆಗೆ ಠೇವಣಿ ಹಣ ಪ್ರಮಾಣ (ಲಕ್ಷ ರೂ.) | 15.3 | 35.9 | 70.3 | 102.8 | 42.8 |
| ಪ್ರತಿ ಶಾಖೆಯಿಂದ ಸಾಲ ಹಣ ನೀಡಿಕೆ (ಲಕ್ಷ ರೂ.) | 14.8 | 29.9 | 50.6 | 126.5 | 41.9 |
| ತಲಾವಾರು ಠೇವಣಿ (ರೂ.) .. | 59.2 | 630.7 | 1,045.9 | 2,037.7 | 299.2 |
| ತಲಾವಾರು ಸಾಲ ಹಣ ನೀಡಿಕೆ (ರೂ.) .. | 57.5 | 525.6 | 752.2 | 2,508.6 | 293.3 |
| ಪ್ರತಿ ಶಾಖೆಗೆ ಜನಸಂಖ್ಯೆ (ಸಾವಿರ) | 26 | 6 | 7 | 5 | 14 |

ಮೂಲ: ಓಗ್ಮಿ ಇಕನಾಮಿಕ್ ರಿವ್ಯೂ; ಫೆಬ್ರವರಿ, 1979, ಪು. 2

ಆಗಿವೆ. ಅಂತೆಯೇ ಬ್ಯಾಂಕಿಂಗ್ ಅಭಿವೃದ್ಧಿಯ ಇತರ ವಿವರಗಳೂ ಬ್ಯಾಂಕಿಂಗ್ ಸೌಲಭ್ಯದ ಅಸಮತೋಲ ಹಂಚಿಕೆಯನ್ನು ಪ್ರತಿನಿಧಿಸುತ್ತವೆ. ಇಂಥ ಅಸಮತೋಲಕ್ಕೆ ವಾಣಿಜ್ಯ ಬ್ಯಾಂಕುಗಳು ಬಹುಮಟ್ಟಿಗೆ ಕಾರಣವಲ್ಲ. ಆದರೆ ಅವುಗಳನ್ನು ವೃಥಾ ಟೀಕಿಸಲಾಗುತ್ತದೆ. ಇಂಥ ಸ್ಥಿತಿಗೆ ಆರ್ಥಿಕ ವಿಕೇಂದ್ರೀಕರಣ ನೀತಿಯನ್ನು ಸಮರ್ಪಕವಾಗಿ ಅನುಸರಿಸದಿರುವುದು, ಗ್ರಾಮೀಣ ಪ್ರದೇಶದಲ್ಲಿ ಉದ್ಯಮ ಶೀಲತೆಯ ಕೊರತೆ, ಬಡತನ ಮುಂತಾದ ಸಮಸ್ಯೆಗಳಿರು ವುದು ಕಾರಣವಾಗಿದೆ.

ದೇಶದಲ್ಲೇ ಪ್ರಥಮವಾದ ಕೃಷಿ ಸೇವಾ ಸಂಘವನ್ನು ಕರ್ನಾಟಕದಲ್ಲಿ ಸ್ಥಾಪಿಸಲಾಯಿತು. ಇಂದು ಕರ್ನಾಟಕದಲ್ಲಿ 24ಕ್ಕೂ ಹೆಚ್ಚಿನ ಕೃಷಿ ಸಹಕಾರಿ ಸೇವಾ ಸಂಘಗಳು ಅಸ್ತಿತ್ವ ದಲ್ಲಿವೆ. ಈ ಎಲ್ಲಾ ಸಂಸ್ಥೆಗಳು ಬಹುತೇಕ ರಾಷ್ಟ್ರೀಕೃತ ಬ್ಯಾಂಕುಗಳ ವ್ಯಾಪ್ತಿಗೆ ಸೇರಿದವುಗಳಾಗಿವೆ. ಕೃಷಿ ಸಹಕಾರಿ ಸೇವಾ ಸಂಘಗಳು ಕೃಷಿಕರಿಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ನೀಡುವುವು. ಕೃಷಿಕ ರಿಗೆ ಅಗತ್ಯವಾದ ತಾಂತ್ರಿಕ ಮಾಹಿತಿಯನ್ನು ಪೂರೈಸಲು ಸಂಬಂಧಪಟ್ಟ ರಾಷ್ಟ್ರೀಕೃತ ಬ್ಯಾಂಕು ಎಲ್ಲ ನೆರವನ್ನೂ ತಂತ್ರಜ್ಞರನ್ನೂ ಪೂರೈಸುವುದು. ಹೀಗೆ ವಾಣಿಜ್ಯ ಬ್ಯಾಂಕುಗಳು ಕರ್ನಾಟಕದ ಗ್ರಾಮೀಣ ಅಭಿವೃದ್ಧಿಯಲ್ಲಿ ಮಹತ್ತರವಾದ ಪಾತ್ರ ವಹಿಸಿವೆ.

### ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು

ಇಂದು ನಮ್ಮ ದೇಶದಲ್ಲಿ ಒಟ್ಟು 56 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿದ್ದು ಅವುಗಳ 1,965 ಶಾಖೆಗಳಿವೆ. ಜೂನ್ 1979ರಲ್ಲಿ ಕರ್ನಾಟಕದಲ್ಲಿ ನಾಲ್ಕು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿದ್ದುವು. ಅವು 156 ಶಾಖೆಗಳನ್ನು ತೆರೆದಿದ್ದುವು.[7] ಕರ್ನಾಟಕದಲ್ಲಿರುವ ನಾಲ್ಕು ಗ್ರಾಮೀಣ ಬ್ಯಾಂಕುಗಳನ್ನು ಅತ್ಯಂತ ಹಿಂದುಳಿದ ಪ್ರದೇಶಗಳಲ್ಲಿ ಸ್ಥಾಪಿಸಲಾಗಿದೆ. ಇವೆಲ್ಲವುಗಳ ಬಗೆಗೆ ಅಂಕಿ-ಅಂಶಗಳು ಲಭ್ಯವಿಲ್ಲ. ಆದ್ದರಿಂದ ಲಭ್ಯವಿರುವ ಮಾಹಿತಿಯನ್ನು ಬಳಸಿಕೊಂಡು ಕೃಷ್ಣಾ ಗ್ರಾಮೀಣ ಬ್ಯಾಂಕ್ ಮತ್ತು ತುಂಗ ಭದ್ರಾ ಗ್ರಾಮೀಣ ಬ್ಯಾಂಕುಗಳ ಬಗೆಗೆ ಕೆಲವು ವಿವರಗಳನ್ನು ನೀಡಬಹುದಾಗಿದೆ.

ಕೃಷ್ಣಾ ಗ್ರಾಮೀಣ ಬ್ಯಾಂಕನ್ನು ಗುಲ್ಬರ್ಗ ಜಿಲ್ಲೆಯಲ್ಲಿ ಸ್ಥಾಪಿಸಲಾಗಿದೆ. ಕೃಷ್ಣಾ ಗ್ರಾಮೀಣ ಬ್ಯಾಂಕು 24 ಶಾಖೆ ಗಳನ್ನು ಇದುವರೆಗೆ ಹೊಂದಿದ್ದು ಸುಮಾರು 10,500 ರೈತರಿಗೆ ರೂ. 1.5 ಕೋಟಿಯ ವರೆಗೆ ಸಾಲ ಪೂರೈಸಿದೆ. ಗುಲ್ಬರ್ಗ ಜಿಲ್ಲೆಯಲ್ಲಿ ಬೆಳೆ ಹಾಳಾಗಿದ್ದರೂ ಕೃಷ್ಣಾ ಬ್ಯಾಂಕು ಸೇ. 87ರಷ್ಟು ಸಾಲ ಹಣವನ್ನು ಮರಳಿ ಪಡೆದಿದೆ. ತುಂಗಭದ್ರಾ ಗ್ರಾಮೀಣ ಬ್ಯಾಂಕು ಬಳ್ಳಾರಿ ಮತ್ತು ರಾಯ ಚೂರು ಜಿಲ್ಲೆಗಳ ಅಭಿವೃದ್ಧಿಯಲ್ಲಿ ಮಹತ್ತರ ಪಾತ್ರ ವಹಿಸುತ್ತಿದೆ. ಇದುವರೆಗೆ ಈ ಬ್ಯಾಂಕು ಸುಮಾರು ರೂ. 16 ಕೋಟಿಯನ್ನು 1,40,000 ರೈತರಿಗೆ ಪೂರೈಸಿದೆ. ತುಂಗಭದ್ರಾ ಗ್ರಾಮೀಣ ಬ್ಯಾಂಕು 65 ಶಾಖೆಗಳನ್ನು ಹೊಂದಿದೆ. ಈ ಬ್ಯಾಂಕು 326 ಜನರಿಗೆ ಉದ್ಯೋಗ ಕಲ್ಪಿಸಿರುವುದಲ್ಲದೆ, 1.34 ಲಕ್ಷ ಠೇವಣಿದಾರರಿಂದ ರೂ. 360 ಕೋಟಿಯನ್ನು ಠೇವಣಿ ರೂಪದಲ್ಲಿ ಸಂಗ್ರ ಹಿಸಿದೆ. 1980–81ನೆಯ ಸಾಲಿನಲ್ಲಿ ಮತ್ತೆ 9 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಹಿಂದುಳಿದ ಮತ್ತು ಕೃಷಿ ಪ್ರಧಾನವಾದ ಜಿಲ್ಲೆಗಳಲ್ಲಿ ಸ್ಥಾಪಿಸಲು ಕರ್ನಾಟಕ ಸರ್ಕಾರ ಈಚೆಗೆ ನಿರ್ಧರಿಸಿದೆ. ಗ್ರಾಮೀಣ ಪ್ರದೇಶಗಳು ತಮ್ಮ ತಮ್ಮ ಪ್ರದೇಶಗಳಲ್ಲಿ ಸಾಮಾಜಿಕ ಮತ್ತು ಆರ್ಥಿಕ ಅಭಿ ವೃದ್ಧಿಯನ್ನು ಉತ್ತೇಜಿಸುವಲ್ಲಿ ಸಫಲವಾಗಿವೆ.

### ಕೆಲವು ಸಮಸ್ಯೆಗಳು

ಇದುವರೆಗೆ ಕೈಗೊಳ್ಳಲಾದ ಕರ್ನಾಟಕದ ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆಯ ಕಾರ್ಯಾಚರಣೆ ನಮ್ಮ ರಾಜ್ಯದ ಗ್ರಾಮೀಣ ಅಭಿವೃದ್ಧಿಗೆ ನೆರವಾಗಿದೆ. ಆದರೆ ವಿವಿಧ ಹಣಕಾಸು ಸಂಸ್ಥೆಗಳು ಕೃಷಿಗೆ ಹಣಕಾಸು ಪೂರೈಸುತ್ತಿರು ವುದರಿಂದ ಪರಿಸ್ಥಿತಿ ತೀರ ಸಂಕೀರ್ಣವಾಗಿದೆ. ಗ್ರಾಮೀಣ ಕ್ಷೇತ್ರ ಅಪೂರ್ಣ ಅಭಿವೃದ್ಧಿ ಹೊಂದಿರುವುದರಿಂದ ಶೀಘ್ರ ತಮ ಬದಲಾವಣೆ ದೀರ್ಘ ಅವಧಿಯದಾಗಿರುತ್ತದೆ. ಇಂಥ ಸಂಕ್ರಮಣ ಕ್ರಿಯೆಯ ಒಂದು ಪ್ರಮುಖ ಅಂಗ ಮಾತ್ರ ಹಣಕಾಸು ಪೂರೈಕೆ. ಈ ಅಂಶವನ್ನು ನಾವು ಗಮನ ದಲ್ಲಿಟ್ಟುಕೊಳ್ಳಬೇಕು. ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆ ಯಲ್ಲಿ ಹಣಕಾಸು ಸಂಸ್ಥೆಗಳು ಎದುರಿಸುವ ಸಮಸ್ಯೆಗಳು ಅನೇಕ. ಅವನ್ನು ಹೀಗೆ ಪಟ್ಟಿಮಾಡಬಹುದಾಗಿದೆ:

1 ಗ್ರಾಮೀಣ ಬ್ಯಾಂಕಿಂಗ್ ವ್ಯವಸ್ಥೆಯ ಅವಿಭಾಜ್ಯ ಅಂಗ ವಾಗಿ ವಾಣಿಜ್ಯ ಬ್ಯಾಂಕುಗಳಿವೆ. ಗ್ರಾಮೀಣ ಪ್ರದೇಶದಲ್ಲಿ ಉದ್ಯಮಶೀಲತೆಯ ಕೊರತೆಯಿರುವುದರಿಂದ ಇಂದು ಠೇವಣಿ ಹಣ ಗ್ರಾಮಾಂತರ ಪ್ರದೇಶದಿಂದ ನಗರಾಭಿಮುಖ ವಾಗಿ ಹರಿಯತೊಡಗಿದೆ. ಇದನ್ನು ತಡೆಗಟ್ಟಬೇಕು. ಇದನ್ನು

7 ಭಾರತದಲ್ಲಿ ಬ್ಯಾಂಕಿಂಗ್ ಪ್ರವೃತ್ತಿ ಮತ್ತು ಪ್ರಗತಿಯ ವರದಿ: 1978–79 ; ಸಪ್ಲಿಮೆಂಟ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಬುಲೆಟಿನ್, ಜೂನ್ 1979, ಪು. 32

ಹಣಕಾಸು ಸಂಸ್ಥೆಗಳು ಕೈಗೊಳ್ಳುವುದು ಸಾಧ್ಯವಿಲ್ಲ. ಆದ್ದರಿಂದ ಸರ್ಕಾರ ಉದ್ಯಮಶೀಲತೆಯನ್ನು ಮತ್ತು ವಿನಿಯೋಜನೆ (ಇನ್ವೆಸ್ಟ್‌ಮೆಂಟ್) ಮತ್ತು ಉದ್ಯೋಗಾವಕಾಶಗಳನ್ನು ಹೆಚ್ಚಿಸಲು ಇತರ ಬಗೆಗಳಲ್ಲಿ ಯತ್ನಿಸಬೇಕು. 2 ಬಡತನ ಮತ್ತು ಅರೆ-ಉದ್ಯೋಗವೇ ಪ್ರಮುಖವಾಗಿರುವ ಗ್ರಾಮೀಣ ಪ್ರದೇಶದಲ್ಲಿ ಠೇವಣಿ ಸಂಚಯನ ಹೆಚ್ಚಾಗಿಲ್ಲ; ಹಾಗೂ ಬ್ಯಾಂಕುಗಳ ವಹಿವಾಟಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಲಾಭ ಕಾಣಲು ಸಾಧ್ಯವಿಲ್ಲ. ಇದರಿಂದಾಗಿಯೇ ಇಂದು ರಾಷ್ಟ್ರೀಕೃತ ಬ್ಯಾಂಕುಗಳ ಶಾಖೆಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಆರಂಭಿಸುವ ದರ ತೀವ್ರವಾಗಿ ಇಳಿಮುಖವಾಗುತ್ತಿದೆ. ಇದೊಂದು ಶುಭಸೂಚನೆ ಎಂದುಕೊಳ್ಳಬಹುದು. ಏಕೆಂದರೆ ಕಡಿಮೆ ವೆಚ್ಚದಲ್ಲಿ ಸಹಕಾರಿ-ವಾಣಿಜ್ಯ ಬ್ಯಾಂಕಿಂಗ್ ಗುಣಗಳೆರಡನ್ನೂ ಪಡೆದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲು ಅವಕಾಶವಿರುವಾಗ ಅಧಿಕ ವೆಚ್ಚದ ವಾಣಿಜ್ಯ ಬ್ಯಾಂಕುಗಳನ್ನು ಗ್ರಾಮೀಣ ಪ್ರದೇಶಕ್ಕೆ ಪುನಃ ಕೊಂಡೊಯ್ಯುವುದರಲ್ಲಿ ಯಾವ ಅರ್ಥವಿದೆ? 3 ಕರ್ನಾಟಕದ ಸಹಕಾರಿ ಬ್ಯಾಂಕುಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳು ನೀಡಿರುವ ಸಾಲಗಳ ಬಹುಭಾಗ ಪಾವತಿಯಾಗದೆ ಸುಸ್ತಿಯಲ್ಲಿದೆ. ಅವುಗಳ ಸಾಲ ನೀಡಿಕೆ ಸಾಮರ್ಥ್ಯ ಇದರಿಂದಾಗಿ ಮೊಟಕಾಗಿದೆ. ಈ ಸಮಸ್ಯೆಗೆ ಕೇಂದ್ರ ಸರ್ಕಾರ, ರಿಸರ್ವ್ ಬ್ಯಾಂಕು ಮತ್ತು ಕರ್ನಾಟಕ ಸರ್ಕಾರ ಒಂದು ಸೂಕ್ತ ಪರಿಹಾರ ಕಂಡುಹಿಡಿಯುವುದು ತುರ್ತು ಅವಶ್ಯ. 4 ಅನುತ್ಪಾದಕ ವೆಚ್ಚಗಳಿಗೆ ಸಾಂಸ್ಥಿಕ ಹಣಕಾಸು ಪೋಲಾಗದಂತೆ ನೋಡಿಕೊಳ್ಳುವುದು ಎಲ್ಲ ಬ್ಯಾಂಕುಗಳ/ಸಂಘಗಳ ನೈತಿಕ ಹೊಣೆಯಾಗಿದೆ. 5 ಕರ್ನಾಟಕ ಸರ್ಕಾರ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಬೆಳವಣಿಗೆಯಲ್ಲಿ ಸಾಕಷ್ಟು ಪ್ರಗತಿಯನ್ನು ಇದುವರೆಗೆ ಸಾಧಿಸಿಲ್ಲ.

ಹಣಕಾಸು ಪೂರೈಕೆಯೊಂದರಿಂದಲೇ ತೀವ್ರ ಆರ್ಥಿಕಾಭಿವೃದ್ಧಿ ಆಗುವುದಿಲ್ಲ. ಆದ್ದರಿಂದ ಗ್ರಾಮೀಣ ಕ್ಷೇತ್ರಕ್ಕೆ ಉತ್ಪಾದನ ಪರಿಕರಗಳನ್ನು ಸಕಾಲದಲ್ಲಿ ಪೂರೈಸಲು ಸರ್ಕಾರ ಕ್ರಮ ಕೈಗೊಳ್ಳಬೇಕು. ಆರ್ಥಿಕ ಚಟುವಟಿಕೆಗಳ ವಿಕೇಂದ್ರೀಕರಣ, ಉದ್ಯಮಶೀಲತೆಯ ಬೆಳವಣಿಗೆ, ಶಿಕ್ಷಣದ ವೃತ್ತಿಪರತೆ, ಅಭಿವೃದ್ಧಿ ವಾತಾವರಣದ ಸೃಷ್ಟಿ, ಸಾಗಣೆ, ಅಭಿವೃದ್ಧಿ ಮುಂತಾದವು ನಮ್ಮ ಇಂದಿನ ಅಗತ್ಯವಾಗಿವೆ. ಈ ದಿಸೆಯಲ್ಲಿ ಸರ್ಕಾರದ ತುರ್ತು ಕ್ರಮ ಅಗತ್ಯ. ಆಗ ಮಾತ್ರ ಬ್ಯಾಂಕಿಂಗ್ ವ್ಯವಸ್ಥೆ ಸಮತೋಲಯುಕ್ತ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಯಲ್ಲಿ ಪ್ರಧಾನವಾದ ಪಾತ್ರ ವಹಿಸಲು ಸಾಧ್ಯ.

# ಕೃಷಿ ಅಭಿವೃದ್ಧಿ ಮತ್ತು ವಾಣಿಜ್ಯ ಬ್ಯಾಂಕುಗಳು

ಎನ್. ಎಸ್. ಭಟ್

**ವಾಣಿಜ್ಯ ಕೈಗಾರಿಕೆಗಳ ಅಲ್ಪಕಾಲಿಕ ಉದರಿ ಆಗತ್ಯಗಳ ಪೂರೈಕೆಯಲ್ಲೇ ವಿಶೇಷ ಪರಿಣತಿ ಸಂಪಾದಿಸಿರುವ ವಾಣಿಜ್ಯ ಬ್ಯಾಂಕುಗಳು ವ್ಯವಸಾಯ ವಲಯಕ್ಕೆ ಹೆಚ್ಚು ದಕ್ಷವಾಗಿ ಧನದ ನೆರವು ನೀಡುವಂತಾಗಲು ಏನು ಮಾಡಬೇಕು ?**

ಭಾರತ ಕೃಷಿಪ್ರಧಾನವಾದ ದೇಶ. ಇದರ ಜನಸಂಖ್ಯೆಯ ಸೇಕಡ 75ರಷ್ಟು ಮಂದಿ ಕೃಷಿಯನ್ನು ಅವಲಂಬಿಸಿದ್ದಾರೆ. ಭಾರತದ ವಾರ್ಷಿಕ ವರಮಾನದಲ್ಲಿ ಸೇಕಡ ಸುಮಾರು 50ರಷ್ಟು ಕೃಷಿವಲಯದಿಂದ ಬರುತ್ತದೆ. ಆದ್ದರಿಂದ ಭಾರತದ ಆರ್ಥಿಕ ಅಭಿವೃದ್ಧಿ ಮತ್ತು ಭಾರತದ ಅತ್ಯಧಿಕ ಜನರ ಜೀವನಮಟ್ಟದ ಏಳಿಗೆ ಕೃಷಿ ಅಭಿವೃದ್ಧಿಯನ್ನು ಹೊಂದಿಕೊಂಡಿದೆ.

ಭಾರತದ ಕೃಷಿಕರಲ್ಲಿ ಹೆಚ್ಚಿನವರು ಸಣ್ಣ ಹಿಡುವಳಿ ದಾರರು ಮತ್ತು ಕಡಿಮೆ ವರಮಾನವನ್ನು ಹೊಂದಿದವ ರಾದುದರಿಂದ, ಅವರು ಆಧುನಿಕ ಮತ್ತು ವೈಜ್ಞಾನಿಕ ಬೇಸಾಯ ಕ್ರಮವನ್ನು ಉಪಯೋಗಿಸುವುದಕ್ಕೆ ಬೇಕಾದ ಬಂಡವಾಳವನ್ನು ಒದಗಿಸಿಕೊಳ್ಳುವುದಕ್ಕೆ ಶಕ್ತರಾಗಿಲ್ಲ. ಆದ ಕಾರಣ ಭಾರತದ ಕೃಷಿಯ ಅಭಿವೃದ್ಧಿಯಾಗಬೇಕಾದರೆ ರೈತರಿಗೆ ಸಾಲ ಅನಿವಾರ್ಯವಾಗುತ್ತದೆ. ಭಾರತದ ವಾಣಿಜ್ಯ ಬ್ಯಾಂಕುಗಳು ಭಾರತದ ಕೃಷಿಕ್ಷೇತ್ರಕ್ಕೆ ಸಾಲ ವನ್ನೀಯುವ ಸಂಸ್ಥೆಗಳಲ್ಲಿ ಒಂದಾಗಿವೆ. ಭಾರತದ ಕೃಷಿ ಕ್ಷೇತ್ರದ ಅಭಿವೃದ್ಧಿಗೆ ಬೇಕಾದ ಸಾಲವನ್ನೊದಗಿಸುವುದರಲ್ಲಿ ವಾಣಿಜ್ಯ ಬ್ಯಾಂಕುಗಳ ಪಾತ್ರವನ್ನು ಮತ್ತು ಈ ಕಾರ್ಯದಲ್ಲಿ ವಾಣಿಜ್ಯ ಬ್ಯಾಂಕುಗಳು ಎದುರಿಸಬೇಕಾದ ತೊಂದರೆಗಳನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.

### ಸಾಂಪ್ರದಾಯಿಕ ವಾಣಿಜ್ಯ ಬ್ಯಾಂಕಿಂಗ್ ತತ್ವ

ಸಾಂಪ್ರದಾಯಿಕ ವಾಣಿಜ್ಯ ಬ್ಯಾಂಕಿಂಗ್ ತತ್ತ್ವದ ಪ್ರಕಾರ ವಾಣಿಜ್ಯ ಬ್ಯಾಂಕುಗಳು ವ್ಯಾಪಾರ ಮತ್ತು ಉದ್ಯಮಗಳಿಗೆ ಮಾತ್ರ ಸಾಲವನ್ನು, ಅದರಲ್ಲೂ ಅಲ್ಪಾವಧಿ ಸಾಲವನ್ನು ಕೊಡುವ ಸಂಸ್ಥೆಗಳೆಂದು ಪರಿಗಣಿತವಾಗಿವೆ. ವಾಣಿಜ್ಯ ಬ್ಯಾಂಕುಗಳು ತಮ್ಮ ಬಂಡವಾಳದ ಅಧಿಕ ಭಾಗವನ್ನು ಅಲ್ಪಾವಧಿ ಠೇವಣಿಗಳ ಮೂಲಕ ಪಡೆಯುವುದರಿಂದ, ದೀರ್ಘಾವಧಿ ಸಾಲವನ್ನು ಕೊಡುವುದಕ್ಕಾಗಿ ಅಂಥ ಬಂಡ ವಾಳವನ್ನು ವಿನಿಯೋಗಿಸಲು ಅಶಕ್ತವಾಗಿವೆ ಎಂಬುದೇ ಇದಕ್ಕೆ ಕಾರಣ. ಬ್ಯಾಂಕುಗಳು ತಮ್ಮ ದ್ರವ್ಯತೆಯನ್ನು (ಲಿಕ್ವಿಡಿಟಿ) ಕಾಪಾಡಿಕೊಳ್ಳುವುದಕ್ಕಾಗಿ ಮತ್ತು ತನ್ಮೂಲಕ ತಮ್ಮ ಗ್ರಾಹಕರಲ್ಲಿ ನಂಬಿಕೆಯನ್ನು ಹುಟ್ಟಿಸಿ ತಮ್ಮ ವ್ಯವಹಾರವನ್ನು ಅಭಿವೃದ್ಧಿಗೊಳಿಸಿಕೊಂಡು ಅಧಿಕ ಲಾಭ ಗಳಿಸುವುದಕ್ಕಾಗಿ ಪ್ರಧಾನವಾಗಿ ವಾಣಿಜ್ಯ ಮತ್ತು ಉದ್ಯಮಗಳಿಗೆ ಅಲ್ಪಾವಧಿ ಸಾಲವನ್ನು ಕೊಡುವ ಸಂಸ್ಥೆ ಗಳಾಗಿ ಬೆಳೆದುಬಂದುವು. ಇದು ಇಂಗ್ಲೆಂಡಿನಲ್ಲಿ ಬೆಳೆದುಬಂದ ವಾಣಿಜ್ಯ ಬ್ಯಾಂಕಿಂಗ್ ತತ್ತ್ವ. ಈ ತತ್ತ್ವ ಅನೇಕ ಇತರ ರಾಷ್ಟ್ರಗಳಲ್ಲೂ ಜಾರಿಗೆ ಬಂತು. ಭಾರತದಲ್ಲೂ ವಾಣಿಜ್ಯ ಬ್ಯಾಂಕುಗಳು ಇತ್ತೀಚಿಗಿನವರೆಗೆ ಇದೇ ತತ್ತ್ವವನ್ನು ಅನುಸರಿಸಿಕೊಂಡು ಬಂದುವು. ಆದ ಕಾರಣ ಭಾರತದ ಕೃಷಿ ಅಭಿವೃದ್ಧಿಗೆ ವಾಣಿಜ್ಯ ಬ್ಯಾಂಕುಗಳ ನೆರವು ಇತ್ತೀಚಿನ ವರೆಗೆ ಗಣನೀಯವಾಗಿರಲಿಲ್ಲ. ಭಾರತದ ರಿಸರ್ವ್ ಬ್ಯಾಂಕಿನ ವರದಿಯಂತೆ 1968ರಲ್ಲಿ ಭಾರತದ ಎಲ್ಲ ವಾಣಿಜ್ಯ ಬ್ಯಾಂಕುಗಳು ಒಟ್ಟಿಗೆ ದೇಶದ ಕೃಷಿಕ್ಷೇತ್ರಕ್ಕೆ ನೀಡಿದ ಸಾಲ ಅವುಗಳ ಒಟ್ಟು ಠೇವಣಿಯ ಸೇಕಡ 1.3 ರಷ್ಟು ಮಾತ್ರವಾಗಿತ್ತು.

### ರಾಷ್ಟ್ರೀಕರಣದ ಅನಂತರ

1969ರಲ್ಲಿ ಭಾರತದ 14 ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸಲಾಯಿತು. ದೇಶದ ವಿವಿಧ

ಆರ್ಥಿಕ ವಲಯುಗಳಿಗೆ ಸಾಲ ರೂಪದಲ್ಲಿ ನೆರವು ನೀಡಿ, ಅವುಗಳ ಅಭಿವೃದ್ಧಿಯಲ್ಲಿ ಸಮತೋಲವನ್ನು ಸಾಧಿಸುವುದು ರಾಷ್ಟ್ರೀಕರಣದ ಮಹದುದ್ದೇಶಗಳಲ್ಲಿ ಒಂದು. ಬ್ಯಾಂಕುಗಳು ಕೇವಲ ಲಾಭಗಳಿಸುವ ವ್ಯಾಪಾರ ಸಂಸ್ಥೆಗಳಾಗಿರದೆ ರಾಷ್ಟ್ರದ ಆರ್ಥಿಕ ಅಭಿವೃದ್ಧಿಯ ಒಂದು ಸಾಧನವಾಗಿರಬೇಕೆಂಬುದೇ ರಾಷ್ಟ್ರೀಕರಣದ ಉದ್ದೇಶ. ಈ ಉದ್ದೇಶದಂತೆ, ಬ್ಯಾಂಕು ರಾಷ್ಟ್ರೀಕರಣದ ಅನಂತರ, ರಾಷ್ಟ್ರೀಕೃತ ಮತ್ತು ಇತರ ವಾಣಿಜ್ಯ ಬ್ಯಾಂಕುಗಳಿಗೆ ಕೃಷಿ ಅಭಿವೃದ್ಧಿಗೆ ಹೆಚ್ಚುಹೆಚ್ಚು ನೆರವು ನೀಡುವಂತೆ ಆದೇಶ ನೀಡಲಾಯಿತು. ಈ ಆದೇಶದ ಪ್ರಕಾರ ವಾಣಿಜ್ಯ ಬ್ಯಾಂಕುಗಳು ಭಾರತದ ಕೃಷಿವಲಯದ ಅಭಿವೃದ್ಧಿಗೆ ನೀಡಿದ ಸಾಲರೂಪದ ನೆರವು ಇತ್ತೀಚೆಗೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತ ಬಂದಿದೆ. ಇದಕ್ಕೆ ಸಂಬಂಧಿಸಿದ ಅಂಕ-ಅಂಶಗಳನ್ನು ಕೋಷ್ಟಕ 1ರಲ್ಲಿ ಕೊಡಲಾಗಿದೆ. (ಪುಟ 23 ನೋಡಿ).

ಈ ಅಂಕ-ಅಂಶಗಳ ಪ್ರಕಾರ ಭಾರತದ ಕೃಷಿ ವಲಯದ ಅಭಿವೃದ್ಧಿಗೆ ವಾಣಿಜ್ಯ ಬ್ಯಾಂಕುಗಳು ನೀಡುವ ಸಾಲರೂಪದ ನೆರವು ಇತ್ತೀಚೆಗಿನ ವರ್ಷಗಳಲ್ಲಿ ಹೆಚ್ಚುತ್ತ ಬಂದಿದೆ. 1969ರ ಜೂನ್ ತಿಂಗಳ ಕೊನೆಯಲ್ಲಿ ವಾಣಿಜ್ಯ ಬ್ಯಾಂಕುಗಳ ಒಟ್ಟು ಸಾಲದ ಸೇಕಡ 5.2ರಷ್ಟನ್ನು ಮಾತ್ರ ಕೃಷಿ ವಲಯಕ್ಕೆ ಒದಗಿಸಲಾಗಿದ್ದರೆ, 1979ರ ಮೇ ತಿಂಗಳ ಕೊನೆಯಲ್ಲಿ ವಾಣಿಜ್ಯ ಬ್ಯಾಂಕುಗಳ ಒಟ್ಟು ಸಾಲದಲ್ಲಿ ಸೇಕಡ 11.9ರಷ್ಟು ಕೃಷಿ ವಲಯಕ್ಕೆ ನೀಡಿದ್ದಾಗಿತ್ತು. ಕೃಷಿ ವಲಯದ ಅಭಿವೃದ್ಧಿಗೆ ಸಾಲರೂಪದ ನೆರವು ಅನಿವಾರ್ಯವಾಗಿರುವುದರಿಂದ, ಭಾರತದಲ್ಲಿ ಇತ್ತೀಚೆಗೆ ಕೃಷಿಯಲ್ಲಿ ಕಂಡುಬಂದಿರುವ ಅಭಿವೃದ್ಧಿಗೆ ವಾಣಿಜ್ಯ ಬ್ಯಾಂಕುಗಳು ನೀಡುವ ನೆರವೂ ಒಂದು ಮುಖ್ಯವಾದ ಕಾರಣ ಎಂದರೆ ತಪ್ಪಾಗಲಾರದು.

### ಸಾಲದ ಮರುಪಾವತಿ

ಭಾರತದ ಕೃಷಿವಲಯದ ಅಭಿವೃದ್ಧಿಗೆ ವಾಣಿಜ್ಯ ಬ್ಯಾಂಕುಗಳು ನೀಡುತ್ತಿರುವ ನೆರವಿನ ಪರಿಸ್ಥಿತಿಯನ್ನು ತಿಳಿದುಕೊಳ್ಳಬೇಕಾದರೆ ಆ ಸಾಲದ ಮೊಬಲಗನ್ನು ಮಾತ್ರ ಪರಿಗಣಿಸಿದರೆ ಸಾಲದು. ಸಾಲದ ಮರುಪಾವತಿಯ ಪರಿಸ್ಥಿತಿಯನ್ನು ಅರಿತುಕೊಳ್ಳುವುದು ಅಗತ್ಯ. ಏಕೆಂದರೆ, ಸಕಾಲದಲ್ಲಿ ಸಾಲವನ್ನು ಮರುಪಾವತಿ ಮಾಡುವುದರಿಂದ ರೈತರು ಋಣಮುಕ್ತರಾಗುತ್ತಾರಲ್ಲದೆ ಬ್ಯಾಂಕುಗಳಿಗೂ ಬೇರೆಬೇರೆ ರೈತರಿಗೆ ಸಾಲ ನೀಡಲು ಸಾಧ್ಯವಾಗುತ್ತದೆ. ವಾಣಿಜ್ಯ ಬ್ಯಾಂಕುಗಳ ಕೃಷಿ ಸಾಲದ ಮರುಪಾವತಿ ಸ್ಥಿತಿ ಅಷ್ಟೊಂದು ತೃಪ್ತಿಕರವಾಗಿಲ್ಲ. ಭಾರತದ ರಿಸರ್ವ್ ಬ್ಯಾಂಕಿನ ವರದಿಯಂತೆ, 1973ರ ಜೂನ್ ತಿಂಗಳ ಕೊನೆಯಲ್ಲಿ ಮರುಪಾವತಿಗೊಂಡ ಕೃಷಿ ಸಾಲ ಮರುಪಾವತಿಯಾಗಬೇಕಿದ್ದ ಸಾಲದ ಸೇಕಡ 49.8ರಷ್ಟಾಗಿದ್ದುದು, 1978ರ ಜೂನ್ ತಿಂಗಳ ಕೊನೆಯಲ್ಲಿ ಸೇಕಡ 51.2ರಷ್ಟಕ್ಕೆ ಮಾತ್ರ ಏರಿತು.

ಕೃಷಿ ಸಾಲದ ಮರುಪಾವತಿಯಲ್ಲಾಗುವ ವಿಳಂಬಕ್ಕೆ ಹಲವಾರು ಕಾರಣಗಳಿವೆ. ಅತಿವೃಷ್ಟಿ ಅನಾವೃಷ್ಟಿಗಳಿಂದ ಅಥವಾ ಇತರ ಕಾರಣಗಳಿಂದ ಆಗುವ ಫಸಲು ನಷ್ಟ, ವ್ಯವಸಾಯೋತ್ಪನ್ನಗಳ ಬೆಲೆಗಳ ಏರಿಳಿತಗಳಿಂದ ರೈತರ ವರಮಾನಗಳಲ್ಲಾಗುವ ಏರುಪೇರು, ಕೃಷಿ ಸಾಲದ ದುರುಪಯೋಗದ ಪರಿಣಾಮಗಳು ಇವು ಕೃಷಿಸಾಲದ ಮರುಪಾವತಿಯಲ್ಲಾಗುವ ವಿಳಂಬಕ್ಕೆ ಕೆಲವು ಕಾರಣಗಳು. ಕೃಷಿ ವಾಣಿಜ್ಯೋದ್ಯಮದಷ್ಟು ಲಾಭದಾಯಕವಲ್ಲದಿರುವುದು ಕೃಷಿ ಸಾಲದ ಮರುಪಾವತಿಯಲ್ಲಾಗುವ ವಿಳಂಬಕ್ಕೆ ಇನ್ನೊಂದು ಮುಖ್ಯ ಕಾರಣ.

### ಕೃಷಿ ಸಾಲ ನೀಡಿಕೆಗೆ ಅಡಚಣೆಗಳು

ವಾಣಿಜ್ಯ ಬ್ಯಾಂಕುಗಳು ಭಾರತದ ಕೃಷಿವಲಯಕ್ಕೆ ಸಾಲ ನೀಡುವಾಗ ಕೆಲವು ಅಡಚಣೆಗಳನ್ನು ಎದುರಿಸಬೇಕಾಗುತ್ತದೆ. ಇವುಗಳ ಪೈಕಿ ಈ ಮುಂದಿನವು ಮುಖ್ಯವಾದವು:

1 ಆಧಾರ (ಸೆಕ್ಯೂರಿಟಿ) ಇಲ್ಲದಿರುವುದು: ಭಾರತದ ರೈತರಲ್ಲಿ ಹೆಚ್ಚಿನವರು ಬಡವರು. ಬೇಸಾಯವೇ ಅವರ ಜೀವನಾಧಾರ. ವಾಣಿಜ್ಯ ಬ್ಯಾಂಕುಗಳಿಂದ ಸಾಲವನ್ನು ಪಡೆಯಲು ಬೇಕಾಗುವ ಆಧಾರ ಪತ್ರಗಳು (ಪ್ರತಿಭೂತಿಗಳು) ಇವರಲ್ಲಿ ಇರುವುದಿಲ್ಲ. ವಾಣಿಜ್ಯ ಬ್ಯಾಂಕುಗಳು ಹೆಚ್ಚಾಗಿ ಸರಕಾರಿ ಪತ್ರಗಳು, ಹುಂಡಿಗಳು, ಷೇರುಗಳು, ದಾಸ್ತಾನು ಸರಕುಗಳು ಮುಂತಾದವುಗಳ ಆಧಾರದ ಮೇಲೆ ಅಲ್ಪಾವಧಿ ಸಾಲವನ್ನೀಯುವ ಸಂಸ್ಥೆಗಳಾಗಿವೆ. ಭಾರತದ ರೈತರಲ್ಲಿ ಹೆಚ್ಚಿನವರು ಇಂಥ ಆಧಾರಗಳನ್ನು ಹೊಂದಿದವರಾಗಿಲ್ಲ. ಇದರಿಂದಾಗಿ ಬ್ಯಾಂಕುಗಳು ಕೃಷಿಗೆ ಸಾಲ ನೀಡುವಾಗ ಆಧಾರರಹಿತ ಸಾಲವನ್ನೋ, ಫಸಲಿನ ಮೇಲಿನ ಸಾಲವನ್ನೋ ಕೊಡಬೇಕಾಗುತ್ತದೆ. ಇಂಥ ಸಾಲಗಳ ಮರುಪಾವತಿಯನ್ನು ಸಮಯಕ್ಕೆ ಸರಿಯಾಗಿ ಪಡೆಯುವುದು ಕಷ್ಟವಾಗುವುದರಿಂದ ಬ್ಯಾಂಕುಗಳ ದ್ರವತ್ವದ ಸ್ಥಿತಿಗೆ ಧಕ್ಕೆಯುಂಟಾಗುವ ಸಂಭವವಿದೆ.

2 ಕೃಷಿ ಸಾಲದ ವಿನಿಯೋಗದ ಮೇಲ್ವಿಚಾರಣೆಯ ಕಷ್ಟ: ಇನ್ನೊಂದು ಗಂಭೀರವಾದ ತೊಡಕೇನೆಂದರೆ, ರೈತರು ಸಾಲದ ದುರುಪಯೋಗ ಮಾಡದೆ ಅದನ್ನು ಸರಿಯಾದ ಉತ್ಪಾದನೆಗಾಗಿ ವಿನಿಯೋಗಿಸುವಂತೆ ನೋಡಿಕೊಳ್ಳುವುದು. ಬ್ಯಾಂಕು ಕಛೇರಿ, ಮತ್ತು ಆ ಬ್ಯಾಂಕಿನಿಂದ ಸಾಲ ಪಡೆದ

ಕೋಷ್ಟಕ 1

**ಅನುಸೂಚಿತ (ಷೆಡ್ಯೂಲ್ಡ್) ವಾಣಿಜ್ಯ ಬ್ಯಾಂಕುಗಳ ಒಟ್ಟು ಸಾಲದಲ್ಲಿ ಭಾರತದ ಕೃಷಿವಲಯದ ಪಾಲು**

(ಕೋಟಿ ರೂ.ಗಳಲ್ಲಿ)

| | ಜೂನ್ 1969 | ಜೂನ್ 1970 | ಜೂನ್ 1971 | ಜೂನ್ 1972 | ಡಿಸೆಂಬರ್ 1973 | ಡಿಸೆಂಬರ್ 1974 | ಡಿಸೆಂಬರ್ 1975 | ಜೂನ್ 1976 | ಜೂನ್ 1977 | ಜೂನ್ 1978 | ಮೇ 1979 |
|---|---|---|---|---|---|---|---|---|---|---|---|
| 1 ಬ್ಯಾಂಕುಗಳು ನೀಡಿದ್ದ ಒಟ್ಟು ಸಾಲ .. | 3,599 | 4,213 | 4,805 | 5,480 | 7,062 | 7,993 | 9,769 | 11,620 | 13,607 | 15,960 | 18,575 |
| 2 ಕೃಷಿ ವಲಯಕ್ಕೆ ನೀಡಿದ್ದ ಸಾಲ | 188 (5.2) | 342 (8.1) | 382 (7.9) | 439 (8.0) | 618 (8.8) | 781 (9.8) | 1,024 (10.5) | 1,092 (9.4) | 1,381 (10.2) | 1,726 (10.8) | 2,203 (11.9) |

ಮೂಲ: ಭಾರತದ ರಿಸರ್ವ್ ಬ್ಯಾಂಕಿನ ವಾರ್ಷಿಕ ವರದಿಗಳು ಮತ್ತು ಟ್ರೆಂಡ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯ

ವಿ.ಸೂ.: ಆವರಣಗಳೊಳಗಿನ ಅಂಕಿಗಳು ಬ್ಯಾಂಕುಗಳ ಒಟ್ಟು ಸಾಲದಲ್ಲಿ ಕೃಷಿವಲಯದ ಪಾಲಿನ ಸೇಕಡವಾರುಗಳು

ರೈತರ ಜಮೀನುಗಳು ದೂರ ದೂರ ಸ್ಥಳಗಳಲ್ಲಿರುವುದರಿಂದ ಬ್ಯಾಂಕುಗಳ ಸಿಬ್ಬಂದಿಗಳಿಗೆ ಕೃಷಿ ಸಾಲಗಳ ದುರುಪಯೋಗ ನಡೆಯದಂತೆ ನೋಡಿಕೊಳ್ಳುವುದು ಕಷ್ಟವಾಗುತ್ತದೆ. ಇದರಿಂದಾಗಿ ಸಾಲದ ದುರುಪಯೋಗ ಸಾಧ್ಯವಾಗಿ, ರೈತ ಸಮಯಕ್ಕೆ ಸರಿಯಾಗಿ ಸಾಲದ ಮರುಪಾವತಿ ಮಾಡಲು ಅಶಕ್ತನಾಗುತ್ತಾನೆ; ರೈತನ ಋಣಬಾಧೆ ಜಾಸ್ತಿಯಾಗುತ್ತದೆ; ಕೃಷಿ ಅಭಿವೃದ್ಧಿಯ ಗತಿಯೂ ಕುಗ್ಗುತ್ತದೆ.

3 ಪ್ರಾಕೃತಿಕ ಅಂಶಗಳು: ಮುಂಗಾರು ಪರಿಸ್ಥಿತಿ, ಹವಾಗುಣ ಮೊದಲಾದ—ರೈತರ ಹತೋಟಿಯಲ್ಲಿಲ್ಲದ—ಪ್ರಾಕೃತಿಕ ಪರಿಸ್ಥಿತಿಗಳನ್ನು ಕೃಷಿ ಉತ್ಪಾದನೆ ಹೊಂದಿಕೊಂಡಿದೆ. ಈ ಪರಿಸ್ಥಿತಿಗಳು ಪ್ರತಿಕೂಲವಾಗಿರುವ ವರ್ಷದಲ್ಲಿ ಕೃಷಿಕನ ವರಮಾನ ಕಡಿಮೆಯಾಗಿ ಅವನು ಸಾಲದ ಮರುಪಾವತಿ ಮಾಡಲು ಅಶಕ್ತನಾಗುತ್ತಾನೆ. ಪ್ರಾಕೃತಿಕ ಪರಿಸ್ಥಿತಿಗಳು ಅನುಕೂಲವಾಗಿದ್ದು ಕೃಷಿ ಉತ್ಪಾದನೆ ಉತ್ತಮವಾಗಿದ್ದಾಗಲೂ, ಕೃಷಿ ಉತ್ಪನ್ನಗಳ ಬೆಲೆಗಳಲ್ಲಾಗುವ ಏರಿಳಿತಗಳಿಂದ ರೈತನ ವರಮಾನ ಕ್ಷೀಣಿಸುವ ಸಾಧ್ಯತೆ ಇದೆ. ಇಂಥ ತೊಂದರೆಗಳನ್ನು ನಿವಾರಿಸಲು ಸರಿಯಾದ ಕೃಷಿ ವಿಮಾ ವ್ಯವಸ್ಥೆ, ಮಾರುಕಟ್ಟೆ ಮತ್ತು ಧಾರಣೆಗಳ ಹತೋಟಿ ಮುಂತಾದವು ಅಗತ್ಯ. ಇವು ಇನ್ನೂ ಸರಿಯಾಗಿ ಆಗದಿರುವ ಭಾರತದಲ್ಲಿ ವಾಣಿಜ್ಯ ಬ್ಯಾಂಕುಗಳು ಕೃಷಿಗೆ ಸಾಲ ನೀಡುವಾಗ ತೊಂದರೆಗಳನ್ನು ಎದುರಿಸಬೇಕಾಗುತ್ತದೆ.

4 ಪರಿಣತಿ ಮತ್ತು ಅನುಭವಗಳ ಕೊರತೆ: ಇತ್ತೀಚೆಗಿನ ವರ್ಷಗಳ ವರೆಗೂ ಭಾರತದ ವಾಣಿಜ್ಯ ಬ್ಯಾಂಕುಗಳು ವ್ಯಾಪಾರ ಮತ್ತು ಉದ್ಯಮಗಳಿಗೆ ಸಾಲ ನೀಡುವ ಸಂಸ್ಥೆಗಳಾಗಿ ಬೆಳೆದು ಬಂದುದರಿಂದ ಅವು ತಮ್ಮ ಸಾಲ ನೀಡಿಕೆ ನೀತಿ, ಸಿಬ್ಬಂದಿ ವರ್ಗದ ಮತ್ತು ಮೇಲ್ವಿಚಾರಕ ಸಿಬ್ಬಂದಿಯ ಜ್ಞಾನ ಮತ್ತು ಅನುಭವ ಇವನ್ನು ವ್ಯಾಪಾರೋದ್ಯಮಗಳಿಗೆ ಸಾಲ ನೀಡುವುದಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನೆದುರಿಸುವುದಕ್ಕೆ ಸಾಧ್ಯವಾಗುವಂತೆಯೇ ಹೊಂದಿಸಿಕೊಂಡು ಬಂದಿವೆ. ಕೃಷಿ ವಲಯಕ್ಕೆ ಸಾಲ ನೀಡಲು ಬೇಕಾದ ಪರಿಣತಿ ಮತ್ತು ಅನುಭವಗಳನ್ನು ಅವು ಇನ್ನೂ ಹೊಂದಿಲ್ಲ. ಇದರಿಂದಾಗಿ ಬ್ಯಾಂಕುಗಳು ಕೃಷಿವಲಯಕ್ಕೆ ಸಾಲ ನೀಡುವಾಗ ಸಾಲದ ಉದ್ದೇಶ, ಉಪಯೋಗ, ಪ್ರಾಮುಖ್ಯ ಮುಂತಾದ ವಿಷಯಗಳನ್ನು ಸರಿಯಾಗಿ ಪರಿಗಣಿಸಲು ಅಸಮರ್ಥವಾಗಿ, ಬ್ಯಾಂಕಿನ ಬಂಡವಾಳದ ದುರುಪಯೋಗವಾಗುವ ಸಾಧ್ಯತೆ ಇದೆ.

### ಉಪಸಂಹಾರ

ಮೇಲಿನ ಅಧ್ಯಯನದಿಂದ ತಿಳಿದುಬರುವುದೇನೆಂದರೆ, ಭಾರತದ ವಾಣಿಜ್ಯ ಬ್ಯಾಂಕುಗಳು ಇತ್ತೀಚೆಗಿನ ವರ್ಷಗಳ ವರೆಗೆ ಮುಖ್ಯವಾಗಿ ವ್ಯಾಪಾರ ಮತ್ತು ಉದ್ಯಮಗಳಿಗೆ ಸಾಲ ನೀಡುವ,ಅದರಲ್ಲೂ ಅಲ್ಪಾವಧಿ ಸಾಲ ನೀಡುವ,ಸಂಸ್ಥೆಗಳಾಗಿ ಬೆಳೆದುಬಂದ ಕಾರಣ ಕೃಷಿ ವಲಯಕ್ಕೆ ಅವು ಕೊಡುವ ಸಾಲ ಏನೊಂದೂ ಗಣನೀಯ ಪ್ರಮಾಣದಲ್ಲಿರಲಿಲ್ಲ. ಬ್ಯಾಂಕು ರಾಷ್ಟ್ರೀಕರಣದ ಅನಂತರ ಬ್ಯಾಂಕುಗಳು ಕೇವಲ ಲಾಭ ಗಳಿಸುವ ವ್ಯಾಪಾರೀ ಸಂಸ್ಥೆಗಳಾಗಿರದೆ ದೇಶದ ಆರ್ಥಿಕ ಅಭಿವೃದ್ಧಿಯ ಸಾಧನಗಳಲ್ಲೊಂದಾಗಿರಬೇಕೆಂಬಅಭಿಪ್ರಾಯವನ್ನು ಅಂಗೀಕರಿಸಲಾಯಿತು. ಇದರಂತೆ ವಾಣಿಜ್ಯ ಬ್ಯಾಂಕುಗಳು ದೇಶದ ಬೇರೆಬೇರೆ ಆರ್ಥಿಕ ವಲಯಗಳಿಗೆ ಸಾಲವನ್ನೊದಗಿಸಿ ಅವುಗಳ ಸಮತೋಲ ಅಭಿವೃದ್ಧಿಯಲ್ಲಿ ಪಾತ್ರ ವಹಿಸಬೇಕೆಂದು ಆದೇಶಿಸಲಾಯಿತು. ಈ ಆದೇಶದಂತೆ ಬ್ಯಾಂಕು ರಾಷ್ಟ್ರೀಕರಣದ ಅನಂತರ ವಾಣಿಜ್ಯ ಬ್ಯಾಂಕುಗಳು ಭಾರತದ ಕೃಷಿ ವಲಯಕ್ಕೆ ಕೊಟ್ಟ ಸಾಲರೂಪದ ನೆರವು ವರ್ಷದಿಂದ ವರ್ಷಕ್ಕೆ ಹೆಚ್ಚುತ್ತ ಬಂದಿದೆ. ಆದರೆ, ವಾಣಿಜ್ಯ ಬ್ಯಾಂಕುಗಳು ಕೃಷಿವಲಯಕ್ಕೆ ಸಾಲವನ್ನೊದಗಿಸುವಾಗ ಅನೇಕ ತೊಂದರೆಗಳನ್ನೆದುರಿಸಬೇಕಾಗುತ್ತದೆ. ಬ್ಯಾಂಕುಗಳ ಬಂಡವಾಳ ದುರುಪಯೋಗವಾಗದೆ ದೇಶದ ಆರ್ಥಿಕ ಏಳಿಗೆಗಾಗಿ ಸರಿಯಾಗಿ ವಿನಿಯೋಗಿಸಲ್ಪಡಬೇಕಾದರೆ ಈ ತೊಂದರೆಗಳನ್ನು ನಿವಾರಿಸಲು ಕ್ರಮ ಕೈಗೊಳ್ಳಬೇಕು. ಹಾಗೆ ಆದರೆ ಮಾತ್ರವೇ ದೇಶದ ಬ್ಯಾಂಕಿಂಗ್ ವ್ಯವಸ್ಥೆ ನಮ್ಮ ಆರ್ಥಿಕ ಅಭಿವೃದ್ಧಿಯ ಒಂದು ಸಾಧನವಾಗಲು ಸಾಧ್ಯವಿದೆ.

## ರಫ್ತು-ಆಮದು ಬ್ಯಾಂಕ್

ಭಾರತದ ಆಯಾತ–ನಿರ್ಯಾತ ವ್ಯಾಪಾರದಲ್ಲಿ ಉದರಿ ನೆರವು ದೊರಕಿಸಿಕೊಡುವ ಉದ್ದೇಶದಿಂದ ರಫ್ತು–ಆಮದು ಬ್ಯಾಂಕ್ ಒಂದು ಸ್ಥಾಪಿತವಾಗಲಿದೆ. ಎರಡು ವರ್ಷಗಳ ಹಿಂದೆಯೇ ಬಂದ ಈ ಸಲಹೆಗೆ ಭಾರತ ಸರಕಾರ ಈಗ ಅಸ್ತು ಎಂದಿದೆ. ಸರಕಾರಿ ಒಡೆತನದಲ್ಲಿರುವ ಈ ಬ್ಯಾಂಕಿನ ಪಾವತಿಯಾದ ಬಂಡವಾಳ ರೂ. 50 ಕೋಟಿ ಆಗಿರುತ್ತದೆ. ಇದರ ಅಧಿಕೃತ ಬಂಡವಾಳ ರೂ. 200 ಕೋಟಿ. ಮುಖ್ಯವಾಗಿ ದೀರ್ಘಕಾಲಿಕ ರಫ್ತು ಉದರಿ ಒದಗಿಸುವ ಈ ಬ್ಯಾಂಕು ಆಮದಿಗೂ ನೆರವು ನೀಡುತ್ತದೆ. ಭಾರತದ ಕೈಗಾರಿಕಾ ಅಭಿವೃದ್ಧಿ ಬ್ಯಾಂಕಿನ ಅಂತರರಾಷ್ಟ್ರೀಯ ಧನಪೋಷಣೆಯ ಕಾರ್ಯವನ್ನು ಈ ಬ್ಯಾಂಕು ವಹಿಸಿಕೊಳ್ಳುತ್ತದೆ.

# ಇಪ್ಪತ್ತು ಅಂಶಗಳ ಕಾರ್ಯಕ್ರಮ ಮತ್ತು ಬ್ಯಾಂಕುಗಳು

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

**ಸಾಮಾಜಿಕ ನ್ಯಾಯದೊಂದಿಗೆ ಆರ್ಥಿಕ ಅಭಿವೃದ್ಧಿ ಸಾಧಿಸುವ ಉದ್ದೇಶವುಳ್ಳ ಇಪ್ಪತ್ತು ಅಂಶಗಳ ಕಾರ್ಯಕ್ರಮದ ಯಶಸ್ಸಿಗಾಗಿ ಬ್ಯಾಂಕುಗಳು ಏನು ಮಾಡಬೇಕು ?**

1951ರಲ್ಲಿ ಪ್ರಾರಂಭವಾದ ನಮ್ಮ ಯೋಜನೆಗಳ ಪ್ರಮುಖ ಉದ್ದೇಶ ಸಾಮಾಜಿಕ ನ್ಯಾಯವನ್ನೊಳಗೊಂಡ ಆರ್ಥಿಕ ಬೆಳವಣಿಗೆ. ಈ ಉದ್ದೇಶಗಳ ಸಾಧನೆಗಾಗಿ ಪಂಚ ವಾರ್ಷಿಕ ಯೋಜನೆಗಳು ರೂಪುಗೊಂಡುವು. ದುರ್ಬಲ ವರ್ಗದವರ ಅದರಲ್ಲೂ ಸಣ್ಣ ಹಿಡುವಳಿದಾರರು ಮತ್ತು ಭೂರಹಿತ ಕಾರ್ಮಿಕರು, ಕುಶಲ ಕರ್ಮಿಗಳು, ಕೈಮಗ್ಗ ನೇಕಾರರು ಮತ್ತು ಗುಡ್ಡಗಾಡು ಜನರ ಅಭಿವೃದ್ಧಿ ಈ ಯೋಜನೆಗಳ ಮುಖ್ಯ ಉದ್ದೇಶಗಳಲ್ಲಿ ಸೇರಿವೆ. ಹೀಗಿದ್ದಾಗ್ಯೂ ಕಳೆದ ಮೂವತ್ತು ವರ್ಷಗಳಲ್ಲಿ ಆರ್ಥಿಕ ಬೆಳವಣಿಗೆ ಬಡಜನರನ್ನು ಸಾಕಷ್ಟು ಮುಟ್ಟಲಿಲ್ಲ. 1975ರ ಜುಲೈ 1ರಂದು ಘೋಷಿಸಲಾದ ಮತ್ತು ಇತ್ತೀಚೆಗೆ ಪುನಶ್ಚೇತನಗೊಂಡ ಇಪ್ಪತ್ತು ಅಂಶಗಳ ಕಾರ್ಯಕ್ರಮ ಸಾಮಾಜಿಕ ನ್ಯಾಯ ನೀಡುವ ಆರ್ಥಿಕ ಬೆಳವಣಿಗೆಗೆ ನೆರವಾಗುವ ಎಲ್ಲ ಸಂಸ್ಥೆಗಳ ಕಾರ್ಯವಿಧಾನಕ್ಕೆ ಹೊಸ ತಿರುವು ಕೊಟ್ಟಿದೆ. ಬಡವರು ಹಾಗೂ ದುಃಸ್ಥಿತಿಗೀಡಾದವರಿಗೆ ಆಶಾಕಿರಣ ಕಾಣಿಸುವ ಕ್ರಮವಾಗಿ ಈ ಇಪ್ಪತ್ತು ಅಂಶಗಳ ಕಾರ್ಯಕ್ರಮ ರೂಪುಗೊಂಡಿದೆ. ಈ ಕಾರ್ಯಕ್ರಮದ ಮುಖ್ಯ ಉದ್ದೇಶಗಳು ನಾಲ್ಕು: 1 ಏರುತ್ತಿರುವ ಬೆಲೆಗಳನ್ನು ಇಳಿಸಿ, ಜನಸಾಮಾನ್ಯರ ಬದುಕಿಗೆ ಅವಶ್ಯವಾದ ಪದಾರ್ಥಗಳು ಸುಲಭವಾಗಿ ದೊರಕುವಂತೆ ಉತ್ಪಾದನೆ ವಿತರಣೆಗಳ ಸುವ್ಯವಸ್ಥೆ. 2 ಅನೇಕ ವರ್ಷಗಳಿಂದ ಶೋಷಣೆಗೆ ಒಳಗಾದ ದಲಿತರಿಗೆ ಸಾಮಾಜಿಕ ನ್ಯಾಯ ನೀಡಿಕೆ. 3 ನಿಸರ್ಗದತ್ತವಾಗಿರುವ ದೈಹಿಕ, ಬೌದ್ಧಿಕ ಶಕ್ತಿಗಳನ್ನು ಸದುಪಯೋಗ ಪಡಿಸಿಕೊಳ್ಳಲಾಗದ ಜನಕ್ಕೆ ಉದ್ಯೋಗ ಕಲ್ಪನೆ. 4 ದಾರಿದ್ರ್ಯ ನಿವಾರಣೆ. ಒಟ್ಟಿನಲ್ಲಿ ಈ ಕಾರ್ಯಕ್ರಮಗಳು ಸುಧಾರಣೆ, ಉತ್ಪಾದನೆ ಮತ್ತು ವಿತರಣೆಗಳಿಗೆ ನೇರವಾಗಿ ಸಂಬಂಧಿಸಿವೆ.

### ಸಮಸ್ಯೆಯ ಸ್ವರೂಪ

ಇಪ್ಪತ್ತು ಅಂಶಗಳ ಕಾರ್ಯಕ್ರಮ ಪ್ರಮುಖವಾಗಿ ಬಡಜನತೆಯ ಏಳ್ಗೆಗಾಗಿ ರೂಪುಗೊಂಡಿದೆ. ಭಾರತ ಹಳ್ಳಿಗಳ ದೇಶ. ಹಳ್ಳಿಗಳ ಬಡಜನರ ಉದ್ಧಾರಕಾರ್ಯವಾಗದೆ ಆರ್ಥಿಕ ಬೆಳವಣಿಗೆ ಸಾಧ್ಯವಿಲ್ಲವೆನ್ನುವುದು ನಿರ್ವಿವಾದ. 470 ಲಕ್ಷ ಭೂರಹಿತ ಕಾರ್ಮಿಕರು ನಮ್ಮ ದೇಶದಲ್ಲಿ ಇದ್ದಾರೆ. ಅಂದರೆ ಗ್ರಾಮೀಣ ಜನಸಂಖ್ಯೆಯ ಸುಮಾರು ಕಾಲು ಭಾಗದಷ್ಟು ಜನರಿಗೆ ಭೂಮಿಯಿಲ್ಲ. 1972–73ರ ಅನುಭೋಗ ವೆಚ್ಚವಾದ ರೂ. 34ನ್ನು ಆಧರಿಸಿ ನೋಡಿದರೆ 43.5%ರಷ್ಟು ಗ್ರಾಮೀಣ ಜನತೆ ಬಡತನದ ಗೆರೆಗಿಂತ ಕೆಳಗಿದ್ದಾರೆ. ವ್ಯವಸಾಯದ ಭೂಮಿಯ ಅರ್ಧದಷ್ಟು (357 ಲಕ್ಷ ಹೆಕ್ಟೇರ್) ನೆಲ ಪಡೆದಿರುವ ರೈತರ ಸರಾಸರಿ ಹಿಡುವಳಿ ಒಂದು ಹೆಕ್ಟೇರಿಗಿಂತ ಕಡಿಮೆ. ಸುಮಾರು 134 ಲಕ್ಷ ಹೆಕ್ಟೇರ್ ಭೂಮಿ ಒಂದರಿಂದ ಎರಡು ಹೆಕ್ಟೇರು ಜಮೀನು ಹೊಂದಿರುವ ರೈತರ ಒಡೆತನದಲ್ಲಿದೆ. ಒಟ್ಟಿನಲ್ಲಿ ಸೇಕಡ 70ರಷ್ಟು ಸಾಗುವಳಿಯೋಗ್ಯ ಭೂಮಿ ಸಣ್ಣ ಹಾಗೂ ಅಂಚಿನ ಕೃಷಿಕರಿಗೆ ಸೇರಿದೆ.

ಗ್ರಾಮೀಣ ಬಡಜನರಲ್ಲಿ ಹರಿಜನ ಮತ್ತು ಬುಡಕಟ್ಟು ಜನಾಂಗದವರ ಬಗ್ಗೆ ವಿಶೇಷ ಗಮನ ಅಗತ್ಯ. ಸಾಧಾರಣವಾಗಿ ಹರಿಜನರು ಭೂರಹಿತ ವರ್ಗದಲ್ಲಿದ್ದಾರೆ. ಇಂಥವರು ಸುಮಾರು 7 ಕೋಟಿಗೂ ಮಿಕ್ಕಿ ಇದ್ದಾರೆ. ಬುಡಕಟ್ಟು

ಜನಾಂಗದವರು ಸುಮಾರು 4.3 ಕೋಟಿ ಇದ್ದಾರೆ. 1971ರ ಜಾನೇಷುಮಾರಿಯ ಪ್ರಕಾರ ಮೇಘಾಲಯ, ನಾಗಾ ಲ್ಯಾಂಡ್ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶ ಗಳಾದ ಅರುಣಾಚಲಪ್ರದೇಶ, ದಾದ್ರಾ-ನಗರ್ ಹವೇಲಿ, ಲಕ್ಷದ್ವೀಪ ಹಾಗೂ ಮೀಜೋರಮ್‌ಗಳಲ್ಲಿ ಸೇಕಡ 50ಕ್ಕೂ ಹೆಚ್ಚಿನ ಜನರು ಬುಡಕಟ್ಟು ಜನಾಂಗಕ್ಕೆ ಸೇರಿದವರು. ಹಿಮಾಚಲ ಪ್ರದೇಶ, ಮಧ್ಯ ಪ್ರದೇಶ, ಮಹಾರಾಷ್ಟ್ರ, ಆಂಧ್ರ ಪ್ರದೇಶ, ಅಸ್ಸಾಂ, ಬಿಹಾರ್, ಗುಜರಾತ್, ಮಣಿ ಪುರ, ಒರಿಸ್ಸಾ, ರಾಜಸ್ಥಾನ್ ಮತ್ತು ತ್ರಿಪುರಾಗಳಲ್ಲಿ ಕೂಡ ಈ ಜನಾಂಗ ಸಾಂದ್ರೀಕೃತವಾಗಿರುವುದು ಕಂಡು ಬರುತ್ತದೆ. ಕರ್ನಾಟಕ, ಕೇರಳ, ತಮಿಳು ನಾಡು, ಉತ್ತರ ಪ್ರದೇಶಗಳಲ್ಲಿ ಕೂಡ ಬುಡಕಟ್ಟು ಜನರು ಹರಡಿದಂತೆ ಇದ್ದಾರೆ. ಇಪ್ಪತ್ತು ಅಂಶಗಳ ಕಾರ್ಯಕ್ರಮದ ಅನುಷ್ಠಾನ ದಲ್ಲಿ ಈ ದುರ್ಬಲ ವರ್ಗದವರನ್ನು ತೀವ್ರವಾಗಿ ಗಮನಕ್ಕೆ ತೆಗೆದುಕೊಳ್ಳಬೇಕಾದ್ದು ಅತ್ಯವಶ್ಯ.

### ಇದುವರೆಗಿನ ಸಾಧನೆ

ಯೋಜನೆಯ ಆದ್ಯತೆಗಳಿಗೆ ಗಮನ ನೀಡಿ ಆರ್ಥಿಕ ಬೆಳವಣಿಗೆಗೆ ಅಗತ್ಯವಾದ ನೆರವು ನೀಡುವಲ್ಲಿ ವಾಣಿಜ್ಯ ಬ್ಯಾಂಕುಗಳು ಪ್ರಮುಖ ಪಾತ್ರ ವಹಿಸುತ್ತಿರುವುದು ಸರ್ವ ವೇದ್ಯ. ಸಾಲ ನೀಡಿಕೆಗೆ ಅಗತ್ಯವಾದ ಠೇವಣಿಗಳನ್ನು ಸಂಗ್ರಹಿಸುವುದರಲ್ಲಿ ಗಣನೀಯ ಪ್ರಗತಿಯನ್ನು ನಮ್ಮ ಬ್ಯಾಂಕುಗಳು ಸಾಧಿಸಿವೆ. ಸರ್ಕಾರಿ ಕ್ಷೇತ್ರದ ಇಪ್ಪತ್ತೆಂಟು ಬ್ಯಾಂಕುಗಳು ದೇಶದಲ್ಲಿನ ಒಟ್ಟು ಬ್ಯಾಂಕುಗಳ 90%ರಷ್ಟು ಠೇವಣಿಯನ್ನು ಹೊಂದಿವೆ. ಖಾಸಗಿ ಕ್ಷೇತ್ರದ ಬ್ಯಾಂಕುಗಳೂ ಈ ದಿಸೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿವೆ. ಬ್ಯಾಂಕಿಂಗ್ ಸೌಲಭ್ಯ ಇಂದು ಹಳ್ಳಿಗಳಲ್ಲಿ ಗಣನೀಯ ಗಾತ್ರದಲ್ಲಿ ಸಿಗುತ್ತದೆ. ವರ್ಷೇ ವರ್ಷೇ ತೆರೆಯಲಾಗು ತ್ತಿರುವ ಬ್ಯಾಂಕುಶಾಖೆಗಳು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗುತ್ತಿವೆ. ದೇಶದ ಕೇಂದ್ರ ಬ್ಯಾಂಕಾದ ರಿಸರ್ವ್ ಬ್ಯಾಂಕ್ ಕೂಡ ಗ್ರಾಮ ಪ್ರದೇಶಗಳಲ್ಲಿ ಶಾಖೆ ತೆರೆಯುವ ಬ್ಯಾಂಕುಗಳಿಗೆ ಸುಲಭವಾಗಿ ಪರವಾನಗಿ ನೀಡುತ್ತಿದೆ. ಅನೇಕ ರಾಜ್ಯಗಳಲ್ಲಿಯ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆ ಯಾಗಿದೆ. ಬ್ಯಾಂಕಿಂಗ್ ಸೌಲಭ್ಯ ಹಳ್ಳಿಗರ ಮನೆ ಬಾಗಿಲಿಗೆ ಬರುತ್ತಿದೆ. 1969–70ರ ಅವಧಿಯಲ್ಲಿ ಆದ ಬೆಳವಣಿಗೆಯ ಅಂಕಿ-ಅಂಶಗಳು ಪ್ರಗತಿಯ ವೇಗವನ್ನು ವ್ಯಕ್ತಪಡಿಸುತ್ತವೆ:

| | ಜೂನ್ 1969 | ಜೂನ್ 1979 |
|---|---|---|
| ಬ್ಯಾಂಕು ಶಾಖೆಗಳು (ಒಟ್ಟು) | 8,262 | 30,202 |
| ಬ್ಯಾಂಕು ಶಾಖೆಗಳು (ಹಳ್ಳಿಗಳಲ್ಲಿ) | 1,654 | 14,000 |
| ಪ್ರತಿ ಬ್ಯಾಂಕು ಶಾಖೆಗೆ ಜನಸಂಖ್ಯೆ | 65,000 | 18,000 |
| ಠೇವಣಿಗಳು (ಕೋಟಿ ರೂ.ಗಳಲ್ಲಿ) | 4,600 | 28,535 |
| ಸಾಲಗಳು (ಕೋಟಿ ರೂ.ಗಳಲ್ಲಿ) | 3,600 | 19,000 |
| ಠೇವಣಿ ಲೆಕ್ಕಗಳು (ಲಕ್ಷಗಳಲ್ಲಿ) | 180 | 1,000 |
| ಆದ್ಯತೆ ಕ್ಷೇತ್ರಗಳಿಗೆ ನೀಡಲಾದ ಸಾಲ (%) | 14 | 33 |

ಹೊಸ ಆರ್ಥಿಕ ಕಾರ್ಯಕ್ರಮದ ಇಪ್ಪತ್ತು ಅಂಶಗಳಲ್ಲಿ ಬ್ಯಾಂಕುಗಳಿಗೆ ನೇರವಾಗಿ ಸಂಬಂಧಿಸುವ ಅಂಶಗಳೆಂದರೆ ಇವು: ಅಗತ್ಯ ವಸ್ತುಗಳ ಪೂರೈಕೆ; ಹೊಸದಾಗಿ ಭೂಮಿ ನೀಡಲಾದ ಭೂರಹಿತ ರೈತರಿಗೆ ಸಾಲ ಸೌಲಭ್ಯ; ಜೀತ ಮುಕ್ತರಿಗೆ ನೆರವು; ಋಣ ವಿಮೋಚನೆ ಪಡೆದ ಗ್ರಾಮಸ್ಥ ರಿಗೆ ಸ್ವಂತ ಉದ್ಯೋಗಾವಕಾಶಕ್ಕೆ ನೆರವು; ನೀರಾವರಿ-ಜಲಸಮೃದ್ಧಿ; ಕೈಮಗ್ಗ ಕೈಗಾರಿಕೆ ಅಭಿವೃದ್ಧಿ; ನಿಯಂತ್ರಿತ ಬಟ್ಟೆ ವಿತರಣೆಗೆ ಸಹಾಯ; ಸುಲಲಿತ ರಸ್ತೆ ಸಾರಿಗೆ; ನಿಯಂತ್ರಿತ ಬೆಲೆಗಳಲ್ಲಿ ಪುಸ್ತಕ ಲೇಖನ ಸಾಮಗ್ರಿ ಪೂರೈಕೆ; ಕೈಗಾರಿಕೆಯಲ್ಲಿ ಕಾರ್ಮಿಕರ ಸಹಯೋಗ; ಅಧಿಕ ಬಂಡವಾಳ ಮತ್ತು ನಿರ್ಗತಿಕರಿಗೆ ನೆಲೆ. ಈ ಹನ್ನೆರಡು ಅಂಶಗಳಲ್ಲಿ ಎಲ್ಲವೂ ಬ್ಯಾಂಕುಗಳಿಗೆ ಹೊಸವಲ್ಲ. ಸಣ್ಣ ನೀರಾವರಿ ಯೋಜನೆ, ಕೈಮಗ್ಗ ಕೈಗಾರಿಕೆ ಮತ್ತು ರಸ್ತೆ ಸಾರಿಗೆ ಮುಂತಾದ ಕ್ಷೇತ್ರಗಳಿಗೆ 1975ಕ್ಕೂ ಮೊದಲೇ ಬ್ಯಾಂಕು ಗಳು ನೆರವು ನೀಡುತ್ತಿದ್ದುವು. 1975ರಿಂದೀಚೆಗೆ ಈ ಕ್ಷೇತ್ರಗಳ ಪ್ರಾಮುಖ್ಯದತ್ತ ಮತ್ತಷ್ಟು ಗಮನ ಹೆಚ್ಚಿ ಬ್ಯಾಂಕುಗಳು ನೆರವು ನೀಡಿಕೆ ವಿಧಾನದಲ್ಲಿ ಕೆಲವು ಬದಲಾವಣೆ ಗಳನ್ನು ಮಾಡಿಕೊಳ್ಳಬೇಕಾಯಿತು.

ಇಪ್ಪತ್ತು ಅಂಶಗಳು ಜಾರಿಗೆ ಬಂದ ಕೂಡಲೇ 1975–76ರಲ್ಲಿ ಬ್ಯಾಂಕುಗಳು ರೂ. 1,137.73 ಕೋಟಿಯಷ್ಟು ನೆರವನ್ನು 18,33,305 ಜನರಿಗೆ ಭಿನ್ನಕ ಬಡ್ಡಿ ದರದಲ್ಲಿ ನೀಡಿದುವು. ಇದರಲ್ಲಿ ಬಹು ಪಾಲು ನೆರವನ್ನು ಸಮಾಜದ ಅತಿ ದುರ್ಬಲ ವರ್ಗದವರಿಗೆ ನೀಡಲಾಗಿದೆ ಎಂಬುದು ಗಮನಿಸಬೇಕಾದ ವಿಷಯ.

1980ರ ಮಾರ್ಚ್ 6ರಂದು ಕೇಂದ್ರ ಹಣಕಾಸು ಸಚಿವರು ರಾಷ್ಟ್ರೀಕೃತ ವಲಯದ ಬ್ಯಾಂಕುಗಳು ಮತ್ತು ಅವಧಿ ಸಾಲ ನೀಡಿಕೆ ಸಂಸ್ಥೆಗಳ ಮುಖ್ಯಾಧಿಕಾರಿಗಳೊಡನೆ

ನಡೆಸಿದ ಸಭೆಯಲ್ಲಿ, ಈ ಸಂಸ್ಥೆಗಳು ನೀಡುವ ಒಟ್ಟು ಉದರಿಯ 40%ನ್ನು ಆದ್ಯತೆಯ ಕ್ಷೇತ್ರಗಳಿಗೆ ನೀಡ ಬೇಕೆಂದು ತೀರ್ಮಾನಿಸಲಾಯಿತು. ಈ ಮೊದಲು ಅವು 33⅓%ನ್ನು ಮಾತ್ರ ಈ ಕ್ಷೇತ್ರಗಳಿಗೆ ಮೀಸಲುಗೊಳಿಸಿದ್ದುವು. 40%ರಲ್ಲಿ ಬಹುಪಾಲು ನೆರವು 20 ಅಂಶಗಳ ಕಾರ್ಯಕ್ರಮದಲ್ಲಿ ಒಳಗೊಂಡಿರುವ ಕ್ಷೇತ್ರಗಳಿಗೆ ಹೋಗ ಬೇಕೆಂಬುದು ಈ ಸಭೆಯಲ್ಲಿ ತೀರ್ಮಾನಿಸಲಾದ ಮತ್ತೊಂದು ವಿಷಯ. 15ನೆಯ ಮಾರ್ಚ್ 1980ರಂದು ರಿಸರ್ವ್ ಬ್ಯಾಂಕು ತನ್ನ ಡೆಪ್ಯುಟಿ ಗೌರ್ನರ್ ಡಾ. ಕೃಷ್ಣಸ್ವಾಮಿಯವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ನೇಮಿಸಿ, ಈ ಮುಂದಿನ ವಿಷಯಗಳ ಬಗ್ಗೆ ಅಧ್ಯಯನ ನಡಸಲು ಹೇಳ ಲಾಯಿತು:

1 ಇಪ್ಪತ್ತು ಅಂಶಗಳ ಕಾರ್ಯಕ್ರಮಗಳಲ್ಲಿ ನೆರವು ಅಗತ್ಯವಿರುವ ನಿರ್ದಿಷ್ಟ ವರ್ಗವನ್ನು ಗುರುತಿಸಿ ಅವುಗಳಿಗೆ ನೆರವು ನೀಡಲು ಇರುವ ವಿಧಾನಗಳನ್ನು ಪರಿಶೀಲಿಸುವುದು;

2 ನೆರವು ನೀಡುವ ಸಂಸ್ಥೆಗಳಿಗೆ ಒಂದು ಗುರಿಯನ್ನು ನಿರ್ದಿಷ್ಟಗೊಳಿಸುವುದು;

3 ನೀಡಲಾದ ನೆರವಿನ ಬಳಕೆಯ ಬಗ್ಗೆ ಬ್ಯಾಂಕುಗಳಲ್ಲಿ ಅಧ್ಯಯನ ನಡಸಲು ಕಾರ್ಯ ವಿಧಾನದ ಬಗ್ಗೆ ಸಲಹೆ ನೀಡುವುದು.

1980ರ ಮಾರ್ಚ್ 25ರಂದು ರಿಸರ್ವ್ ಬ್ಯಾಂಕಿನ ಗವರ್ನರ್ ಪ್ರಮುಖ ಅನುಸೂಚಿತ (ಷೆಡ್ಯೂಲ್ಡ್) ಬ್ಯಾಂಕುಗಳ ಅಧಿಕಾರಿಗಳೊಡನೆ ನಡಸಿದ ಸಮಾಲೋಚನೆಯಲ್ಲಿ ಇಪ್ಪತ್ತು ಅಂಶಗಳ ಕಾರ್ಯಕ್ರಮದ್ದು ದ್ವಿಮುಖ ಉದ್ದೇಶ ಎಂಬುದನ್ನು ಎತ್ತಿ ತೋರಿಸಿದರು. ಅವರೆಂದಂತೆ, ಆರ್ಥಿಕ ಅಸಮತೆಯನ್ನು ಹೋಗಲಾಡಿಸಲು ದುರ್ಬಲ ವರ್ಗದವರ ಸ್ಥಿತಿಯನ್ನು ಉತ್ತಮಗೊಳಿಸುವುದು ಮೊದಲನೆಯ ಉದ್ದೇಶ. ಹಣದುಬ್ಬರ ಪರಿಸ್ಥಿತಿಯನ್ನು ತಡೆಗಟ್ಟಲು ಅಗತ್ಯ ವಸ್ತುಗಳ ಉತ್ಪಾದನೆ ಮತು ವಿತರಣೆ ವ್ಯವಸ್ಥೆಯನ್ನು ಉತ್ತಮಗೊಳಿಸುವುದು ಎರಡನೆಯ ಉದ್ದೇಶ.

### ಅನುಸರಿಸಬಹುದಾದ ಕಾರ್ಯವಿಧಾನ

ಇಪ್ಪತ್ತು ಅಂಶಗಳ ಕಾರ್ಯಕ್ರಮಕ್ಕೆ ನೆರವು ನೀಡುವಲ್ಲಿ ಬ್ಯಾಂಕುಗಳು ಅನುಸರಿಸಬಹುದಾದ ಕಾರ್ಯವಿಧಾನವನ್ನು, ಪ್ರಮುಖ ಅಂಶಗಳಿಗೆ ಸಂಬಂಧಿಸಿದಂತೆ, ಈ ರೀತಿ ಹೇಳಬಹುದು:

1 ಅಗತ್ಯ ವಸ್ತುಗಳ ಬೆಲೆ ನಿಯಂತ್ರಣ: ಅಗತ್ಯ ವಸ್ತುಗಳ ಉತ್ಪಾದನೆಗೆ ಬ್ಯಾಂಕುಗಳು ನೀಡುವ ನೆರವು ರಿಸರ್ವ್ ಬ್ಯಾಂಕಿನ ಸೂಚನೆಗಳಿಗನುಗುಣವಾಗಿ ಇರುತ್ತದೆ. ಈ ದಿಸೆಯಲ್ಲಿ, ಪ್ರತಿಯೊಂದು ಜಿಲ್ಲೆಯ ಕೃಷಿ ಇಲಾಖೆಯವರು ರೈತರಿಗೆ ಸೂಕ್ತ ಹಾಗೂ ಕಾಲಿಕ ತಿಳಿವಳಿಕೆ ನೀಡಿ ಕೃಷಿ ಉತ್ಪಾದನೆ ಹೆಚ್ಚುವಂತೆ ನೋಡಿಕೊಳ್ಳಬೇಕು. ಇದರಿಂದ ಸಾಲ ನೀಡುವ ಬ್ಯಾಂಕಿಗೂ ಸಾಲದ ಮರುಪಾವತಿ ಬಗ್ಗೆ ಹೆಚ್ಚು ಖಾತರಿ ಇರುತ್ತದೆ. ಕಾಪು ದಾಸ್ತಾನು ಹೊಂದಲು ಬ್ಯಾಂಕುಗಳು ನೆರವು ನೀಡುವಂತೆ ಒಂದು ಗುರಿ ಮಿತಿಯನ್ನು ರಿಸರ್ವ್ ಬ್ಯಾಂಕ್ ರೂಪಿಸುವುದು ಅಗತ್ಯ.

ಅಗತ್ಯ ವಸ್ತುಗಳ ವಿತರಣೆಗೆ ಸಂಬಂಧಿಸಿದಂತೆ, ಸಹಕಾರಿ ಗ್ರಾಹಕ ಸಂಸ್ಥೆಗಳು, ಜನತಾ ಬಜಾರ್‌ಗಳು ಮತ್ತು ನಿಯಂತ್ರಿತ ಬೆಲೆ ಅಂಗಡಿಗಳಿಗೆ ನೆರವು ನೀಡಲು ಬ್ಯಾಂಕುಗಳು ಮುಂದೆ ಬರುವುದು ಅಗತ್ಯ. ರಿಸರ್ವ್ ಬ್ಯಾಂಕ್ ತನ್ನ ವರಣಾತ್ಮಕ ಉದರಿ ನಿಯಂತ್ರಣ (Selective Credit Control) ನೀತಿಗೆ ಅನುಗುಣವಾಗಿ ವಿಧಿಸುವ ಅಂತರವನ್ನು (margin) ಶ್ರಾಯಾನುಗುಣವಾಗಿ (season) ಬದಲಾಯಿಸುವುದು ಸೂಕ್ತ.

2 ಭೂಹೀನರಿಗೆ ಭೂಮಿ ನೀಡುವಾಗಲೇ ಸಂಬಂಧಪಟ್ಟ ರಾಜ್ಯ ಸರ್ಕಾರಗಳು ಆ ನೆಲ ಕೃಷಿಯೋಗ್ಯವೆ ಮತ್ತು ಅದರ ಆಧಾರದ ಮೇಲೆ ರೈತ ಸಾಲ ಪಡೆಯಲು ಸಾಧ್ಯವೆ ಎಂಬುದನ್ನು ಅರಿತು ಭೂಮಿ ನೀಡಬೇಕು. ಕೃಷಿಗೆ ಅಯೋಗ್ಯವಾದ ಭೂಮಿಯನ್ನು ನೀಡುವುದರಲ್ಲಿ ಅರ್ಥವಿಲ್ಲ. ಭೂಮಿ ಹೆಚ್ಚು ಕೃಷಿಯೋಗ್ಯವಾಗಿದ್ದಷ್ಟೂ, ಅದನ್ನು ಪಡೆದವನಿಗೆ ಸಾಲ ಪಡೆಯುವ ಸಾಧ್ಯತೆ ಹೆಚ್ಚುತ್ತದೆ ಮತ್ತು ಸಾಲ ನೀಡುವ ಬ್ಯಾಂಕಿಗೆ ಉತ್ತಮ ಆಧಾರ ಸಿಗುತ್ತದೆ.

3 ನಿರ್ಗತಿಕರಿಗೆ ನೆಲೆ ಕಲ್ಪಿಸುವುದು ಇಪ್ಪತ್ತು ಅಂಶಗಳಲ್ಲಿ ಒಂದು. ಮನೆ ಕಟ್ಟಲು ನಿವೇಶನ ಪಡೆದವನಿಗೆ ಗೃಹ ನಿರ್ಮಾಣಕ್ಕೆ ಅಗತ್ಯವಿರುವ ಸಾಮಗ್ರಿಗಳನ್ನು ಕೊಳ್ಳಲು ನೆರವು ನೀಡಲು ಬ್ಯಾಂಕುಗಳಿಗೆ ಸಾಧ್ಯವಾಗಬೇಕು. ರಿಸರ್ವ್ ಬ್ಯಾಂಕಿನ ಇತ್ತೀಚಿನ ಆದೇಶದ ಪ್ರಕಾರ, ಪ್ರಾಯೋಗಿಕವಾಗಿ ನಿರ್ದಿಷ್ಟ ಬ್ಯಾಂಕುಗಳು, ಮನೆ ಕಟ್ಟಲು ಸಾಲ ನೀಡುವ ಯೋಜನೆಯನ್ನು ರೂಪಿಸಲಾಗಿದೆ. ಇದೊಂದು ಗಮನಾರ್ಹ ಮತ್ತು ಸ್ತುತ್ಯರ್ಹ ಕ್ರಮ. ಸಾಲ ಪಡೆಯಲು ಅನುಸರಿಸಬೇಕಾದ ಕ್ರಮ, ಸಾಲ ಪಡೆಯಲು ಅನುಸರಿಸಬೇಕಾದ ಕ್ರಮ ಮತ್ತು ವಿಧಾನಗಳನ್ನು ಸರಳೀಕರಿಸುವುದು ಅಗತ್ಯ. ಮಧ್ಯಮ ಹಾಗೂ ದುರ್ಬಲ ವರ್ಗದವರಿಗೆ ತಮ್ಮದೇ ಆದ ನೆಲೆ ಹೊಂದಲು ಈ ಯೋಜನೆ ನೆರವಾಗಬೇಕು.

4 ಜೀತ ಪದ್ಧತಿ ರದ್ದಾದ ಸ್ಥಳಗಳಲ್ಲಿ, ಜೀತಮುಕ್ತರನ್ನು ನೆಲೆಗೊಳಿಸಲು ಆರ್ಥಿಕ ಸಹಾಯವನ್ನು ಬ್ಯಾಂಕುಗಳು ನೀಡಬೇಕು. ಸರ್ಕಾರ ಜೀತಮುಕ್ತರಿಗೆ ನೀಡಿದ ಭೂಮಿಯಲ್ಲಿ ಕೃಷಿ ಮಾಡಲು ಅಗತ್ಯವಾದ ಪ್ರಾರಂಭಿಕ ಹಣದ ನೆರವನ್ನು ಬ್ಯಾಂಕುಗಳು ಒದಗಿಸುವ ಕಾರ್ಯಕ್ರಮ ಈಗ ಚಾಲ್ತಿಯಲ್ಲಿದೆ.

5 ನೀರಾವರಿ ಅಭಿವೃದ್ಧಿಯ ಉದ್ದೇಶದಿಂದ ರಾಜ್ಯ ಸರ್ಕಾರಗಳು ಎತ್ತುವ ಸಾಲಗಳಿಗೆ ಬ್ಯಾಂಕುಗಳು ಚಂದಾ ನೀಡುವ ಮೂಲಕ ನೆರವು ನೀಡಬಹುದು.

6 ಅಧಿಕ ವಿದ್ಯುತ್ ಉತ್ಪಾದನೆಗೆ ನೆರವಾಗುವಂತೆ ಬ್ಯಾಂಕುಗಳು ವಿದ್ಯುಚ್ಛಕ್ತಿ ಮಂಡಳಿಗಳ ಸಾಲಪತ್ರಗಳಲ್ಲಿ ಹಣ ಹೂಡಬಹುದು.

7 ಕೈಮಗ್ಗ ಕೈಗಾರಿಕೆಯಲ್ಲಿ ಪ್ರಾಮುಖ್ಯ ಪಡೆದಿರುವ ಪ್ರದೇಶಗಳಲ್ಲಿ ಬ್ಯಾಂಕುಗಳು ಅದಕ್ಕೆ ಅಗತ್ಯವಾದ ನೆರವನ್ನು ಪ್ರಾರಂಭಿಕ ಹಂತದಿಂದ ಮಾರಾಟದ ಹಂತದವರೆಗೆ ನೀಡುವ ವಿಶಾಲ ಕಾರ್ಯಕ್ರಮವನ್ನು ರೂಪಿಸಿಕೊಳ್ಳುವುದು ಅಗತ್ಯ.

8 ಯಾವುದೇ ಆರ್ಥಿಕತೆಯಲ್ಲಿ ರಸ್ತೆ ಸಾರಿಗೆ ಅತ್ಯಗತ್ಯ. ರಸ್ತೆ ವಾಹನಗಳ ಉತ್ಪಾದನೆಯನ್ನು, ಅವುಗಳ ಬೆಲೆಯನ್ನು ಕಡಿಮೆಗೊಳಿಸುವ ಉದ್ದೇಶದಿಂದ, ಹೆಚ್ಚಿಸಬೇಕಾದುದು ಅಗತ್ಯ. ಸದ್ಯದಲ್ಲಿ ವಾಹನಗಳ ಬೆಲೆ ಅತ್ಯಧಿಕವಾಗಿದೆ. ರಾಷ್ಟ್ರವ್ಯಾಪಿ ಸನ್ನದು ಪಡೆದ ಸಾರಿಗೆ ಸಂಸ್ಥೆಗಳಿಗೆ ಹಣಕಾಸು ನೆರವನ್ನು ಸೂಕ್ತ ಆಧಾರದ ಮೇಲೆ ಬ್ಯಾಂಕುಗಳು ಒದಗಿಸಬೇಕು. ಇದರಿಂದಾಗಿ, ರಸ್ತೆ ವಾಹನ ಮಾಲೀಕರು ಖಾಸಗಿ ಲೇವಾದೇವಿಗಾರರಿಗೆ ಅತ್ಯಧಿಕ ದರದ ಬಡ್ಡಿ ತೆರುವುದು ತಪ್ಪುತ್ತದೆ.

9 ಇಂದಿನ ವಿದ್ಯಾರ್ಥಿಗಳೇ ಮುಂದಿನ ಜನಾಂಗ. ಅವರ ಇಂದಿನ ವಿದ್ಯಾಭ್ಯಾಸಕ್ಕೆ ಅಗತ್ಯವಾದ ಪುಸ್ತಕಗಳು ಮತ್ತು ಲೇಖನ ಸಾಮಗ್ರಿಗಳನ್ನು ನಿಯಂತ್ರಿತ ಬೆಲೆಗಳಲ್ಲಿ ಒದಗಿಸುವುದು ಇಪ್ಪತ್ತು ಅಂಶಗಳಲ್ಲಿ ಒಂದು. ಸರ್ಕಾರಿ ಶಾಲೆಗಳು, ರಾತ್ರಿ ಶಾಲೆಗಳು, ಮತ್ತು ಹಳ್ಳಿಗಾಡಿನ ವಿದ್ಯಾಸಂಸ್ಥೆಗಳಿಗೆ ಬ್ಯಾಂಕುಗಳು ಭಿನ್ನಕ ಬಡ್ಡಿ ದರದಲ್ಲಿ ಸಾಲ ನೀಡುವುದು ಅಗತ್ಯ. ಪುಸ್ತಕಗಳು, ಲೇಖನ ಸಾಮಗ್ರಿಗಳು, ಪ್ರಯೋಗ ಶಾಲೆಯ ಉಪಕರಣಗಳು, ದೃಕ್-ಶ್ರವಣ ಸಾಧನಗಳು ಮುಂತಾದ ಶಿಕ್ಷಣ ಸಲಕರಣೆಗಳ ಕೊಳ್ಳಿಕೆಗೆ ಬ್ಯಾಂಕುಗಳು ಸಾಲ ನೀಡುವುದರ ಮೂಲಕ ಈ ಅಂಶದಲ್ಲಿ ನಿರೂಪಿತವಾದ ಉದ್ದೇಶ ಸಾಧನೆ ಆಗುತ್ತದೆ.

10 ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದರಲ್ಲೂ ಬ್ಯಾಂಕುಗಳು ಮಹತ್ತರ ಪಾತ್ರ ವಹಿಸಬಹುದು. ಸ್ವಂತ ಉದ್ಯೋಗ ನಡಸಲಿಚ್ಛಿಸುವ ತಾಂತ್ರಿಕ ಕುಶಲತೆ ಮತ್ತು ವ್ಯವಹಾರ ಚತುರತೆಯುಳ್ಳ ಯುವಕರಿಗೆ ಬ್ಯಾಂಕು ಆದ್ಯತೆ ಸಾಲಗಳನ್ನು ನೀಡಬೇಕು. ಅವರು ಸಾಧಿಸುವ ಪ್ರಗತಿಯನ್ನು ಆಗಾಗ್ಗೆ ಗಮನಿಸಿ ಅವರ ಉದ್ಯಮದ ಉತ್ತಮಿಕೆಗೆ ಹೆಚ್ಚಿನ ನೆರವನ್ನು ನೀಡಬಹುದು.

ಇಪ್ಪತ್ತು ಅಂಶಗಳ ಕಾರ್ಯಕ್ರಮದ ಯಶಸ್ವೀ ಅನುಷ್ಠಾನಕ್ಕೆ ಪ್ರತಿ ಬ್ಯಾಂಕೂ ಜಿಲ್ಲಾವಾರು ಅಧಿಕಾರಿಗಳನ್ನು ನೇಮಿಸಿ ಆಯಾ ಜಿಲ್ಲೆಗಳ ಅಗತ್ಯಗಳಿಗನುಗುಣವಾಗಿ ನೆರವು ನೀಡಿಕೆಯಾಗುತ್ತಿದೆಯೇ ಎಂಬುದನ್ನು ಆಗಾಗ್ಗೆ ಅಭ್ಯಸಿಸಬೇಕು. ಅಂತೆಯೇ, ನೀಡಲಾದ ನೆರವು ಉದ್ದೇಶಿತ ಕಾರ್ಯಗಳಲ್ಲಿ ಸರಿಯಾಗಿ ಬಳಕೆಯಾಗುತ್ತಿದೆಯೋ ಎಂಬುದನ್ನು ದೃಢಪಡಿಸಿಕೊಳ್ಳಬೇಕು. ಈ ಕಾರ್ಯಕ್ರಮದ ಮೇಲ್ವಿಚಾರಣೆಗೆ ರಿಸರ್ವ್ ಬ್ಯಾಂಕ್ ಅಧ್ಯಯನ ತಂಡವನ್ನು ವಾಣಿಜ್ಯ ಬ್ಯಾಂಕುಗಳಿಗೆ ಕಳಿಸುವ ಪರಿಪಾಠ ಇಟ್ಟುಕೊಳ್ಳಬೇಕು.

ಇಪ್ಪತ್ತು ಅಂಗಳ ಕಾರ್ಯಕ್ರಮ ಭಾರತಕ್ಕೆ ಹೊಸದೇನೂ ಅಲ್ಲ. 1951ರಲ್ಲಿ ಉದ್ಘಾಟನೆಯಾದ ಯೋಜಿತ ಬೆಳವಣಿಗೆ ಕಾರ್ಯಕ್ರಮಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಈ ಅಂಶಗಳು ಅಡಕವಾಗಿವೆ. ಬೆಲೆ ನಿಯಂತ್ರಣ ಮತ್ತು ಅಗತ್ಯ ವಸ್ತುಗಳ ನಿರಂತರ ಪೂರೈಕೆ ಯಾವುದೇ ಅರ್ಥವ್ಯವಸ್ಥೆಯಲ್ಲಿ ಅಗತ್ಯವಾಗಿ ಇರಬೇಕಾದ್ದು. ಲಾಭ ಗಳಿಕೆಯೇ ಪ್ರಮುಖ ಉದ್ದೇಶವಾಗಿ ಉಳ್ಳ ಖಾಸಗಿ ಬ್ಯಾಂಕುಗಳು ತಮ್ಮ ದೃಷ್ಟಿಕೋನವನ್ನು ಬದಲಿಸಿ ರಾಷ್ಟ್ರೀಕೃತ ಬ್ಯಾಂಕುಗಳೊಡನೆ ದೇಶದ ಆರ್ಥಿಕ ಪ್ರಗತಿಗೆ ನೆರವಾಗಬೇಕಾದುದು ಇಂದಿನ ಅಗತ್ಯ. ಆದರೆ ಲಾಭ ಗಳಿಕೆಯನ್ನು ದೂರಮಾಡಿ ಕಾರ್ಯ ನಿರ್ವಹಿಸುವುದು ರಾಷ್ಟ್ರೀಕೃತ ಬ್ಯಾಂಕುಗಳಿಗೂ ಸಾಧ್ಯವಿಲ್ಲ. ಲಾಭಗಳಿಕೆ, ಸಾರ್ವಜನಿಕ ಹಿತಾಸಕ್ತಿ ಇವುಗಳನ್ನು ಸಮನ್ವಯಗೊಳಿಸುವ ಕಾರ್ಯವಿಧಾನ ಬ್ಯಾಂಕುಗಳಿಗೆ ಅಗತ್ಯ.

# ಹಣದುಬ್ಬರ, ನಿರುದ್ಯೋಗ, ಬೆಳವಣಿಗೆ

ಕೃಷ್ಣೇಗೌಡ

**ಹಣದುಬ್ಬರ, ನಿರುದ್ಯೋಗ, ಬೆಳವಣಿಗೆ—ಇವನ್ನು ಬೇರೆಬೇರೆಯಾಗಿ ಅವಲೋಕಿಸಬಾರದು. ಇವುಗಳಲ್ಲಿ ಒಂದೊಂದೂ ಉಳಿದೆರಡರ ಮೇಲೆ ಪ್ರಭಾವ ಬೀರುವುದರಿಂದ ಈ ಮೂರಕ್ಕೂ ಅನ್ವಯಿಸುವ ಸಮಗ್ರ ತಂತ್ರ ಇಂದು ಅವಶ್ಯವಾಗಿದೆ.**

ಇಂದು ಸಮಾಜವನ್ನು ನಿತ್ಯವೂ ಕಿತ್ತು ತಿನ್ನುತ್ತಿರುವ ಹತ್ತಾರು ಸಮಸ್ಯೆಗಳ ಪೈಕಿ ಹಣದುಬ್ಬರ ಮತ್ತು ನಿರುದ್ಯೋಗಗಳಿಗೆ ಹಿರಿಯ ಸ್ಥಾನ ಕೊಡಬೇಕಾಗಿದೆ. ಬೆಲೆಗಳು ಸ್ಥಿರವಾಗಿದ್ದಂಥ ಒಂದು ಪರಿಸ್ಥಿತಿ ನಮಗೆ ನೆನಪಿಲ್ಲ; ನಿರುದ್ಯೋಗ ಕ್ಷೀಣಿಸುತ್ತಿದ್ದ ಕಾಲವನ್ನೂ ನಾವು ಕಂಡಿಲ್ಲ. ಈ ಎರಡು ಸಮಸ್ಯೆಗಳೇ ಉಳಿದವುಗಳಿಗೆ ಮೂಲ. ಇವು ಉಂಟುಮಾಡುವ ಅನಿಷ್ಟ ಪರಿಣಾಮಗಳಿಗೆ ಕೊನೆಯಿಲ್ಲ. ಇವುಗಳ ನಿವಾರಣೆಗಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳಿಗೂ ಕೊರತೆಯಿಲ್ಲ. ಹತ್ತಾರು ಯೋಜನೆಗಳು, ಕೋಟ್ಯಂತರ ರೂಪಾಯಿಗಳ ವೆಚ್ಚ. ಆದರೂ ಉಳಿದು ಬೆಳೆಯುತ್ತಿರುವ ಈ ಎರಡು ಕಂಟಕಗಳನ್ನು ನಿವಾರಿಸಿಕೊಳ್ಳದಿದ್ದರೆ ದೇಶಕ್ಕೆ ನೆಲೆಯಿಲ್ಲ, ಬೆಲೆ ಬರುವುದಿಲ್ಲ.

ಜನರು ಉದ್ಯೋಗ ಅರಸುವುದು ಶಕ್ತಿಪ್ರದರ್ಶನಕ್ಕೆ ಅಲ್ಲ, ಮನಸ್ಸಂತೃಪ್ತಿಗೂ ಅಲ್ಲ; ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿ, ಮೈ ಮುಚ್ಚಿಕೊಳ್ಳುವುದಕ್ಕಾಗಿ. ಆದರೆ ಕೇವಲ ಉದ್ಯೋಗವೃದ್ಧಿಯಿಂದ—ಎರಡು ಕೈಗಳ ಕೆಲಸಕ್ಕೆ ನಾಲ್ಕು ಕೈಗಳನ್ನು ಹಚ್ಚುವುದರಿಂದ—ಬಡತನ ನಿವಾರಣೆ ಸಾಧ್ಯವಿಲ್ಲ. ಬಹುಪಾಲು ಉದ್ಯೋಗಸ್ಥರು ಬಡತನ ರೇಖೆಯ ಕೆಳಗೇ ಬದುಕುತ್ತಿದ್ದಾರೆ. ಉದ್ಯೋಗಸ್ಥರು ತಮ್ಮ ಮೂಲಭೂತ ಅಗತ್ಯಗಳನ್ನು ಪೂರೈಸಿಕೊಳ್ಳುವಂತಾಗಬೇಕಾದರೆ ಆರ್ಥಿಕ ಬೆಳವಣಿಗೆ ತ್ವರಿತಗೊಳ್ಳಬೇಕು. ಒಟ್ಟಾರೆ ಯಾವುದೇ ಸಮಾಜದ ಸರ್ವತೋಮುಖ ಪ್ರಗತಿಗೆ ಬೆಲೆಗಳ ಸ್ಥಿರತೆ, ಉನ್ನತ ಮಟ್ಟದ ಉದ್ಯೋಗ ಮತ್ತು ಬೆಳವಣಿಗೆ ಅತ್ಯಗತ್ಯ. ಈ ಮೂರೂ ಮಹಾ ಗುರಿಗಳನ್ನು ಏಕಕಾಲದಲ್ಲಿ ಸಾಧಿಸುವುದು ಸಾಧ್ಯವೇ ಎಂಬುದೇ ಇಲ್ಲಿಯ ಮುಖ್ಯವಾದ ಪ್ರಶ್ನೆ.

ಮೇಲಿನ ಪ್ರಶ್ನೆಗೆ ಸಾಂಪ್ರದಾಯಿಕ ಅರ್ಥಶಾಸ್ತ್ರದಿಂದ ಉತ್ತೇಜನಕರವಾದ ಮತ್ತು ದೃಢವಾದ ಉತ್ತರ ದೊರಕುವುದಿಲ್ಲ. ವಿತ್ತೀಯ ಹಾಗೂ ಹಣಕಾಸಿನ ನಿರ್ಬಂಧಗಳಿಂದ ಹಣದುಬ್ಬರವನ್ನು ತಡೆಗಟ್ಟಬಹುದೆಂಬುದು ರೂಢಿಬದ್ಧವಾದ ಎಣಿಕೆ. ಇಂಥ ನಿರ್ಬಂಧಗಳು ಉದ್ಯೋಗ ಮತ್ತು ಬೆಳವಣಿಗೆಯ ಮೇಲೆ ವಿರುದ್ಧ ಪರಿಣಾಮ ಬೀರುವುದುಂಟು. ಪೂರ್ಣ ಉದ್ಯೋಗಕ್ಕಾಗಿ ಕೇನ್ಸ್ ನಿರೂಪಿಸಿದ ನೀತಿಗಳು ಒಟ್ಟು ಬೇಡಿಕೆಯ ಹೆಚ್ಚಳವನ್ನು ಅವಲಂಬಿಸಿವೆ. ವಿಶೇಷವಾಗಿ, ಉದ್ಯೋಗ ಸೃಷ್ಟಿಸುವ ಲೋಕೋಪಯೋಗಿ ಕಾರ್ಯಗಳಿಂದ ಒಟ್ಟು ಬೇಡಿಕೆ ಹೆಚ್ಚಾಗುತ್ತದೆ ಎಂದು ಕೇನ್ಸ್ ಹೇಳಿದ್ದಾನೆ. ಆದರೆ ಹಣದುಬ್ಬರದ ಸನ್ನಿವೇಶದಲ್ಲಿ ಬೇಡಿಕೆಯನ್ನು ಹೆಚ್ಚಿಸುವುದಕ್ಕೆ ಬದಲಾಗಿ ಅದನ್ನು ಕುಗ್ಗಿಸಬೇಕಾಗುತ್ತದೆ. ಆರ್ಥಿಕ ಬೆಳವಣಿಗೆ ವಿನಿಯೋಜನೆಯ (investment) ಹೆಚ್ಚಳವನ್ನು ಅವಲಂಬಿಸಿದೆ. ಆದರೆ ಉಳಿತಾಯ ಹೆಚ್ಚಾಗಿ, ಅನುಭೋಗಿ ಬೇಡಿಕೆ ಕಡಿಮೆಯಾಗದಿದ್ದಲ್ಲಿ ವಿನಿಯೋಜನೆಯ ಹೆಚ್ಚಳದಿಂದ ಹಣದುಬ್ಬರಕ್ಕೆ ದಾರಿಯಾಗುತ್ತದೆ.

ಹಣದುಬ್ಬರ ಮತ್ತು ನಿರುದ್ಯೋಗ ಸಮಸ್ಯೆಗಳಿಗೆ ಪೂರ್ಣ ಪರಿಹಾರವಿಲ್ಲದಿಲ್ಲ. ಪಾಶ್ಚಾತ್ಯ ರಾಷ್ಟ್ರಗಳು ಅಲ್ಪ ಹಣದುಬ್ಬರ ಮತ್ತು ಅಧಿಕ ದರದ ಬೆಳವಣಿಗೆಗಳಿಂದ ಕೂಡಿದ ಪೂರ್ಣ ಉದ್ಯೋಗ ನೀತಿಗಳನ್ನು ಅನುಸರಿಸಲು ಸಮರ್ಥವಾಗಿದ್ದುದನ್ನು ನಾವು ಮರೆಯಬಾರದು. ಇಂದಿಗೂ ಕೆಲವು ರಾಷ್ಟ್ರಗಳು 'ಹಣದುಬ್ಬರ ಸಹಿತವಾದ ಹಿಂಜರಿತ' ವನ್ನು ಅನುಭವಿಸುತ್ತಿರುವಂತೆಯೇ ಇತರ ರಾಷ್ಟ್ರಗಳು, ಪೆಟ್ರೋಲಿಯಂನ ಬೆಲೆಗಳು ಗಗನಕ್ಕೇರುತ್ತಿದ್ದಾಗ್ಯೂ, ಒಂದು

ಸಮತೋಲದಲ್ಲಿ ಮುಂದುವರಿಯುತ್ತಿವೆ. ಆದ್ದರಿಂದ ಇಲ್ಲಿಯ ಸ್ಥಿತಿಗತಿಗಳು ಅಭಿವರ್ಧಿತ ರಾಷ್ಟ್ರಗಳಿಗಿಂತ ಭಿನ್ನ ವಾದವು ಎಂಬುದನ್ನು ಮರೆಯದೆ ನಮ್ಮ ಸಮಸ್ಯೆ ಗಳನ್ನು ತೆರೆದ ಮನಸ್ಸಿನಿಂದ ಪರಿಶೀಲಿಸಬಹುದಾಗಿದೆ. ಬೆಲೆಗಳ ಸ್ಥಿರತೆ, ಉದ್ಯೋಗಸೃಷ್ಟಿ ಮತ್ತು ತ್ವರಿತ ಆರ್ಥಿಕ ಬೆಳವಣಿಗೆಗಾಗಿ ಒಂದು ಸಮಗ್ರವಾದ ತಂತ್ರ ವನ್ನು ನಿಗಮಿಸಿಕೊಳ್ಳಲು ಸಾಧ್ಯವಿದೆ.

### ಹಣದುಬ್ಬರ ಪರಿಸ್ಥಿತಿ

ಪೂರೈಕೆಗಿಂತ ಬೇಡಿಕೆ ಹೆಚ್ಚಾಗಿರುವ ಒಂದು ಸನ್ನಿವೇಶ ವನ್ನು ಹಣದುಬ್ಬರ ಪ್ರತಿನಿಧಿಸುತ್ತದೆ. ಭಾರತದಲ್ಲಿ ಬೇಡಿಕೆಯ ಹೆಚ್ಚಳಕ್ಕಿಂತ ಮಿಗಿಲಾಗಿ ಪೂರೈಕೆಯ ಇಳಿತಾಯ ದಿಂದ ಈ ಸನ್ನಿವೇಶ ಸೃಷ್ಟಿಯಾಗಿದೆ. ಮಳೆ ಕೈಕೊಟ್ಟಾಗ, ಕ್ರಿಮಿಕೀಟಗಳ ಹಾವಳಿ ಹೆಚ್ಚಾದಾಗ ಆಹಾರ ಮತ್ತು ಕಚ್ಚಾ ಪದಾರ್ಥಗಳ ಕೊರತೆ ಸಂಭವಿಸುತ್ತದೆ. ಪರಿಣಾಮ ವಾಗಿ ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ವರಮಾನ ಕಡಿಮೆ ಯಾಗಿ ಕೈಗಾರಿಕಾ ವಲಯದಲ್ಲಿ ಹಿಂಜರಿತ ಪ್ರಾರಂಭ ವಾದರೂ ಪದಾರ್ಥಗಳ ಬೆಲೆಗಳು ಏರತೊಡಗುತ್ತವೆ. ಇದಕ್ಕೆ ಅನುಸಾರವಾಗಿ ಅಸಂಕಲ್ಪಿತ ಆದರೆ ಅನಿವಾರ್ಯ ವಾಗಿ ಹಣದ ವಿಸ್ತರಣೆ ಆರಂಭವಾಗುತ್ತದೆ. ಅಭಾವ ಪರಿಹಾರ ಕಾರ್ಯಕ್ರಮಗಳು ಮತ್ತು ಸರಕಾರಿ ನೌಕರರ ತುಟ್ಟಿಭತ್ಯಗಳ ಏರಿಕೆ—ಇವುಗಳಿಂದಾಗಿ ಸರಕಾರದ ಆಯ ವ್ಯಯ ಕೊರತೆ ಹೆಚ್ಚಾಗುತ್ತದೆ. ಕೈಗಾರಿಕಾ ಕಾರ್ಮಿಕರ ಕೂಲಿಯ ದರಗಳು ಹೆಚ್ಚಾಗಿ, ಉತ್ಪಾದನ ವೆಚ್ಚ ಮತ್ತು ಬೆಲೆಗಳು ಏರತೊಡಗುತ್ತವೆ. ಕೈಗಾರಿಕಾ ವಲಯದಲ್ಲಿ ಕಾರ್ಯನಿರತ ಬಂಡವಾಳಕ್ಕಾಗಿ ಬ್ಯಾಂಕು ಸಾಲಗಳ ಗಾತ್ರ ಹೆಚ್ಚಾಗುತ್ತದೆ. ಹೀಗೆ ಒಮ್ಮೆ ಹಣದುಬ್ಬರದ ಆವರ್ತ ಮೊದಲಾದರೆ ಅದರ ಕಾರಣ–ಪರಿಣಾಮಗಳನ್ನು ಬೇರ್ಪಡಿ ಸುವುದು ಸುಲಭವಲ್ಲ. ಆದರೂ ಭಾರತದಲ್ಲಿ ಹಣದ ವಿಸ್ತರಣೆ ಬಹಳಮಟ್ಟಿಗೆ ಹಣದುಬ್ಬರದ ಪರಿಣಾಮ ವಾಗಿದೆಯೇ ಹೊರತು ಅದಕ್ಕೆ ಕಾರಣವಾಗಿಲ್ಲ ಎಂಬುದು ಗಮನಿಸಬೇಕಾದ ಅಂಶವಾಗಿದೆ.

ಪದಾರ್ಥಗಳ ಬೇಡಿಕೆಯ ವಿಚಾರಕ್ಕೆ ಬಂದರೆ ಭಾರತ ದಲ್ಲಿ ಮೇಲ್ಮುಖವಾದ ಪ್ರವೃತ್ತಿಯನ್ನೇ ಕಾಣುತ್ತೇವೆ. ಇದಕ್ಕೆ ಆರ್ಥಿಕ ಅಂಶಗಳಿಗಿಂತ ಮೇಲಾಗಿ ಜೀವನ ಸಂಬಂಧ ವಾದ ಅಂಶಗಳು ಕಾರಣವಾಗಿವೆ. ಜನಸಂಖ್ಯೆ ವೃದ್ಧಿ ಯಾದಂತೆಲ್ಲ ಜೀವನಾವಶ್ಯಕಗಳ ಬೇಡಿಕೆ ಹೆಚ್ಚಾಗುತ್ತದೆ. ಇಲ್ಲಿ ಹಣಕಾಸಿನ ನೀತಿಯ ಪಾತ್ರ ಗೌಣ. ಹಣ ಸಂಪಾದಿಸ ದವರಿಗೂ ಹಸಿವಾಗುತ್ತದೆ, ಬಟ್ಟೆ ಬೇಕಾಗುತ್ತದೆ. ಜನ ಸಂಖ್ಯೆಗೆ ತಕ್ಕ ಹಾಗೆ ಉಚಿತ ವಿದ್ಯಾಭ್ಯಾಸ ಮತ್ತು ವೈದ್ಯ ಕೀಯ ಸೌಲಭ್ಯಗಳನ್ನು ಸರ್ಕಾರ ಒದಗಿಸಿಕೊಡಬೇಕಾಗು ತ್ತದೆ. ಪರಿಣಾಮವಾಗಿ ಲೇಖನ ಸಾಮಗ್ರಿ, ಔಷಧೋಪ ಚಾರ ಮತ್ತು ನೈರ್ಮಲ್ಯ ಸಾಧನೆಗಳಿಗೆ ಬೇಡಿಕೆ ಹೆಚ್ಚಾಗು ತ್ತದೆ. ಅಲ್ಲದೆ ಉದ್ಯೋಗ ದೊರಕಿಸಿಕೊಂಡವರು ವಿವಿಧ ರೀತಿಯ ಜನಸಾಮಾನ್ಯರ ಸರಕುಗಳನ್ನು (wage goods) ಅನುಭೋಗಿಸತೊಡಗುವರು.

ಸದ್ಯದ ಉದ್ಯೋಗ ಸೃಷ್ಟಿ ಮತ್ತು ಜನಸಂಖ್ಯೆಯ ಬೆಳವಣಿಗೆಯ ದರದ ಆಧಾರದ ಮೇಲೆ, ಮೂಲಭೂತ ಸರಕುಗಳ ಬೇಡಿಕೆ ವರ್ಷಕ್ಕೆ ಸೇಕಡ ಮೂರರಷ್ಟಾದರೂ ಹೆಚ್ಚಾಗುತ್ತದೆ ಎಂದು ಹೇಳಲಾಗಿದೆ. ಸರಕುಗಳ ಪೂರೈಕೆ ಅವುಗಳ ಬೇಡಿಕೆಗೆ ಸರಿಸಮವಾಗಿ ಹೆಚ್ಚಾಗದಿದ್ದಲ್ಲಿ ಬೆಲೆಗಳು ಏರಲೇಬೇಕಾಗುತ್ತದೆ. ಆದ್ದರಿಂದ ಪ್ರಗತಿಗೆ ಅಲ್ಲದಿದ್ದರೂ, ಪ್ರಸ್ತುತ ತಲಾ ವರಮಾನದ ಮಟ್ಟವನ್ನು ಕಾಪಾಡಿಕೊಳ್ಳು ವುದಕ್ಕಾದರೂ ಉತ್ಪಾದನೆಯ ಒಂದು ಕನಿಷ್ಠ ಪ್ರಮಾಣದ ಹೆಚ್ಚಳ ಆವಶ್ಯಕವಾಗುತ್ತದೆ. ಅಂದ ಮೇಲೆ ನಮ್ಮ ಈಗಿರುವ ಪರಿಸ್ಥಿತಿಯನ್ನೇ ಮುಂದುವರಿಸಿಕೊಂಡು ಹೋಗ ಬೇಕಾದರೂ ನಾವು ಬಹಳವಾಗಿ ಹೋರಾಡಬೇಕಾಗಿದೆ.

### ಜೀವನಾವಶ್ಯಕಗಳ ಪ್ರಾಮುಖ್ಯ

ಬೆಲೆ ಸ್ಥಿರತೆಯನ್ನು ಸಾಧಿಸುವ ನಿಟ್ಟಿನಲ್ಲಿ ಹಣಕಾಸಿನ ಅಂಶಗಳಿಗೆ ಪ್ರಾಶಸ್ತ್ಯ ನೀಡುವುದಕ್ಕಿಂತಲೂ ಮೂಲಭೂತ ಜೀವನಾವಶ್ಯಕಗಳ ಉತ್ಪಾದನೆಯನ್ನು ಹೆಚ್ಚಿಸುವ ವಿಚಾರಕ್ಕೆ ಒತ್ತು ಕೊಡಬೇಕೆಂಬುದನ್ನು ಎಲ್ಲರೂ ಒಪ್ಪಬೇಕಾಗುತ್ತದೆ. ನಮ್ಮ ಹಿಂದಿನ ಅನುಭವಗಳು ಈ ಅಂಶಕ್ಕೆ ಸಾಕಷ್ಟು ಸಾಕ್ಷಿ ಒದಗಿಸುತ್ತವೆ. ಉದಾಹರಣೆಗೆ, ಚೀನೀ ಆಕ್ರಮಣದ ಫಲವಾಗಿ, ನಮ್ಮ ರಕ್ಷಣಾ ವೆಚ್ಚಗಳಲ್ಲಿ ಉಂಟಾದ ತೀವ್ರ ಹೆಚ್ಚಳದ ಪರಿಣಾಮವಾಗಿ 1962–63 ಮತ್ತು 1965–66ರ ನಡುವೆ ಉಂಟಾದ ಬೆಲೆ ಏರಿಕೆಯ ವಾರ್ಷಿಕ ಸರಾಸರಿ ದರ ಸೇಕಡ 8ಕ್ಕಿಂತಲೂ ಕಡಿಮೆ ಇತ್ತು. ಇದಕ್ಕೆ ವಿರುದ್ಧವಾಗಿ, ಸರ್ಕಾರದ ವಿನಿಯೋಜನೆಗಳನ್ನು ಗಣನೀಯ ವಾಗಿ ಕುಗ್ಗಿಸಲಾಗಿತ್ತಾದರೂ 1965–66ರಲ್ಲಿ ಸಂಭವಿಸಿದ ಬೆಳೆಯ ವಿನಾಶದಿಂದ ಹಣದುಬ್ಬರ ಸೇಕಡ 16ಕ್ಕೆ ಏರಿತು. 1970–71 ಮತ್ತು 1971–72ರಲ್ಲಿ ಉತ್ತಮ ಬೆಳೆ ಬಂದ ಕಾರಣ ಹಣದ ಸರಬರಾಜಿನ ಏರಿಕೆ 60ರ ದಶಕದ ಮಧ್ಯಭಾಗದಲ್ಲಿದ್ದುದಕ್ಕಿಂತಲೂ ತೀವ್ರವಾಗಿತ್ತಾದರೂ ಹಣ ದುಬ್ಬರದ ವಾರ್ಷಿಕ ದರ ಸೇಕಡ ಐದಕ್ಕಿಂತಲೂ ಕಡಿಮೆ ಯಾಗಿತ್ತು. ಆದರೆ ಅನಂತರದ ಎರಡು ವರ್ಷಗಳಲ್ಲಿ ಆಹಾರೋತ್ಪಾದನೆ ಇಳಿಮುಖವಾಗಲಾಗಿ ಬೆಲೆಗಳು ಪುನಃ ಏರತೊಡಗಿದುವು.

ಪ್ರಸ್ತುತ ಬೆಲೆ ಏರಿಕೆಗೆ ಕಾರಣವಾಗಿ ಬಹಳ ಮಂದಿ ಕಳೆದ ಮೂರು ಆಯ-ವ್ಯಯಗಳು ಸೃಷ್ಟಿಸಿದ ಅಧಿಕ ಮೊತ್ತದ ಕೊರತೆ ತುಂಬುವ ಹಣದತ್ತ ಬೊಟ್ಟು ಮಾಡುವು ದುಂಟು. ಈ ಕಾರಣವನ್ನು ಕೊಂಚ ಬಿಡಿಸಿ ನೋಡುವುದು ಉಚಿತ. ಇತ್ತೀಚಿನ ಬೆಲೆ ಏರಿಕೆಗೆ ಅನೇಕ ಮುಖ್ಯವಾದ ಪದಾರ್ಥಗಳ ವೆಚ್ಚ ಹೆಚ್ಚಾದುದೂ ಒಂದು ಕಾರಣವಾಗಿದೆ. ತೈಲ ಬೆಲೆಗಳ ಏರಿಕೆಯ ವಿಚಾರ ನಮಗೆಲ್ಲ ತಿಳಿದದ್ದೆ. ಜೊತೆಗೆ ಉತ್ಪಾದನ ವೆಚ್ಚ ಹೆಚ್ಚಾಗಲಾಗಿ ಉಕ್ಕು, ಕಲ್ಲಿದ್ದಲು ಗಳಂಥ ಉತ್ಪನ್ನಗಳ ನಿಯಂತ್ರಿತ ಬೆಲೆಗಳೂ ಹೆಚ್ಚಾಗ ಬೇಕಾಯಿತು. ಬೆಲೆ ಪರಿಷ್ಕರಣವನ್ನು ಆದಷ್ಟು ಮುಂದೂ ಡಲು ಹಿಂದೆ ಮಾಡಿದ ಪ್ರಯತ್ನಗಳೂ ಬೆಲೆ ಏರಿಕೆಗೆ ಕಾರಣ ವಾಗಿವೆ. ಅಲ್ಲದೆ 1979ರ ಆಯವ್ಯಯ ಮುಖ್ಯವಾಗಿ ಪ್ರತ್ಯಕ್ಷ ತೆರಿಗೆಯ ವಿಭಾಗಕ್ಕೆ ಅನ್ವಯಿಸಿದಂತೆ ಬೆಲೆ ಏರಿಕೆ ವ್ಯಾಪಕವಾಗುವುದಕ್ಕೆ ಕಾರಣವಾಯಿತು. ಹೀಗೆ ನಾವಿಂದು ಎದುರಿಸುತ್ತಿರುವ ಹಣದುಬ್ಬರ ಬಹಳ ಮಟ್ಟಿಗೆ ಉತ್ಪಾದನ ವೆಚ್ಚ ಹಾಗೂ ತೆರಿಗೆಯ ಒತ್ತಡಗಳಿಂದ ಪ್ರೇರಿತವಾದ್ದಾಗಿದೆ.

### ಸರಬರಾಜಿನ ಪಾತ್ರ

ಆದರೂ ಬೆಲೆ ಏರಿಕೆಯಲ್ಲಿ ಸರಬರಾಜಿನ ಅಂಶಗಳ ಪಾತ್ರವನ್ನು ಕಡೆಗಣಿಸುವಂತಿಲ್ಲ. 1978–79ರಲ್ಲಿ ಅನೇಕ ಆಹಾರ ಸಾಮಗ್ರಿಗಳ ಬೆಲೆಗಳು ಇಳಿದಿದ್ದುದಕ್ಕೆ ಅಧಿಕ ಉತ್ಪನ್ನ ಸ್ಥಿತಿಗತಿಗಳು ಕಾರಣವಾಗಿದ್ದುವು. 1979ರ ಪ್ರಾರಂಭದಿಂದ ಸರಬರಾಜು ಸಾರ್ವತ್ರಿಕವಾಗಿ ಕುಸಿಯ ಲಾರಂಭಿಸಿತು. 1970ರ ದಶಕದಲ್ಲಿ ಒಟ್ಟಾರೆ ಸೇಕಡ ಎಂಟರಷ್ಟು ಬೆಳವಣಿಗೆಯನ್ನು ಕಂಡಿದ್ದ ಕೈಗಾರಿಕಾ ವಲಯ ದಲ್ಲಿ ಉತ್ಪನ್ನ ಸೂಚಿ ಋಣಾತ್ಮಕವಾಯಿತು. 1979ರ ಅನಾವೃಷ್ಟಿಯಿಂದಾಗಿ ಆಹಾರ ಪದಾರ್ಥಗಳ ಅಭಾವ ಉಂಟಾಯಿತು. ಆಹಾರ ಮಂಡಳಿಯ ದಾಸ್ತಾನಿನ ಬಿಡುಗಡೆ ಯಿಂದಾಗಿ ಅಕ್ಕಿ ಮತ್ತು ಗೋಧಿಯ ಸರಬರಾಜು ಸುಮಾ ರಾಗಿದ್ದಿತಾದರೂ ಸಕ್ಕರೆ, ವನಸ್ಪತಿ ಇತ್ಯಾದಿ ಖಾದ್ಯ ವಸ್ತು ಗಳ ಬೆಲೆಗಳು ಒಂದೇ ಸಮನಾಗಿ ಏರತೊಡಗಿದುವು.

ಹಣದುಬ್ಬರ ಉಂಟುಮಾಡುವ ದಣಿವು-ದಾಹಗಳನ್ನು ವಿತ್ತೀಯ ಹಾಗೂ ಹಣ ನಿರ್ಬಂಧಗಳಿಂದ ನೀಗಲಾಗುವುದಿಲ್ಲ. ಯೋಜನಾ ರಜೆಯಿಂದಲೂ ಇವುಗಳ ನಿವಾರಣೆ ಸಾಧ್ಯ ವಾಗುವುದಿಲ್ಲ. ಪದಾರ್ಥಗಳ, ಅದರಲ್ಲಿಯೂ ಮೂಲ ಭೂತ ಆವಶ್ಯಕತೆಗಳ, ನೀಡಿಕೆಯನ್ನು ಸಮರ್ಪಕವಾಗಿ ಹೆಚ್ಚಿಸುವುದರಿಂದ ಮಾತ್ರ ಬೆಲೆ ಏರಿಕೆಯನ್ನು ಕುಗ್ಗಿಸ ಬಹುದು. ಇದಕ್ಕಾಗಿ ಒಂದು ಸುವ್ಯಾಪಕವಾದ ಕ್ರಮ ಕೈಗೊಳಬೇಕು. ಪುಣ್ಯವಶಾತ್ ಮಳೆಗಾಲ ಸಮರ್ಪಕ ವಾಗಿದ್ದರೂ ಬೆಳೆಯ ವಿಧಾನಕ್ಕೆ ವಿಶೇಷ ಗಮನ ಹರಿಸ ಬೇಕು.

ಆಹಾರ ಪದಾರ್ಥಗಳ ಉತ್ಪಾದನೆಯಲ್ಲಿ ಗುರುತಿಸ ಲಾಗಿರುವ ಒಂದು ವಿಲಕ್ಷಣ-ವೈವಿಧ್ಯವೆಂದರೆ ಉತ್ಪಾದನ ಪ್ರವೃತ್ತಿ ಮತ್ತು ಅನುಭೋಗಿ ಬೇಡಿಕೆಗಳು ಬೆಳೆಯಿಂದ ಬೆಳೆಗೆ ಬೇರೆಬೇರೆಯಾಗಿರುವುದು. ಆಹಾರ ಧಾನ್ಯಗಳ ವಿಚಾರದಲ್ಲಿ ಅನಾವೃಷ್ಟಿಯ ವರ್ಷಗಳಲ್ಲೂ ಮಿಗುತೆಯನ್ನು ಕಾಣುತ್ತೇವೆ. ಆದರೆ ಎಣ್ಣೆಬೀಜಗಳಂಥ ಇತರ ಧಾನ್ಯಗಳಿಗೆ ಸಂಬಂಧಿಸಿದಂತೆ ಮಳೆಗಾಲ ಸರಿಯಾಗಿ ನಡೆದರೂ ಕೊರತೆ ಯನ್ನು ಅನುಭವಿಸುತ್ತೇವೆ. ಅಕ್ಕಿ ಗೋದಿಗಳಿಗೆ ಒಂದು ಬೆಲೆಯ ಭರವಸೆ ಇದೆಯಾದರೂ ವನಸ್ಪತಿ, ದ್ವಿದಳ ಧಾನ್ಯಗಳು, ಸಕ್ಕರೆ ಇತ್ಯಾದಿಗಳಿಗೆ ಸಂಬಂಧಿಸಿದ ನೀತಿಯಲ್ಲಿ ಬೆಲೆಗಳನ್ನು ಇಳಿಸುವುದಕ್ಕೆ ಪ್ರಾಶಸ್ತ್ಯ ನೀಡು ತ್ತಿರುವುದೇ ಈ ವೈಪರೀತ್ಯಕ್ಕೆ ಮುಖ್ಯವಾದ ಕಾರಣ. ಆದುದರಿಂದ, ವೈಜ್ಞಾನಿಕ ಸಂಶೋಧನೆಗಳ ಪ್ರಯೋಜನ ಪಡೆದು ಉತ್ಪಾದನಾಂಗಗಳ ಪೂರೈಕೆ ಹಾಗೂ ಸಾಲದ ಸರಬರಾಜನ್ನು ಸಮರ್ಪಕಗೊಳಿಸುವಂಥ ಒಂದು ಸಮಗ್ರ ವಾದ ಬೆಲೆ ನೀತಿಯನ್ನು ರೂಪಿಸಿಕೊಳ್ಳುವುದು ತತ್ ಕ್ಷಣದ ಅಗತ್ಯವಾಗಿದೆ. ಇಂಥ ಒಂದು ನೀತಿಯಿಂದ ಬಿತ್ತನೆಗೆ ಉತ್ತೇಜನ ದೊರಕುವುದಲ್ಲದೆ ಭೂಮಿಯ ಸದುಪ ಯೋಗಕ್ಕೆ ಅವಕಾಶ ಲಭ್ಯವಾಗಿ ಜನತೆಗೆ ಆಹಾರ ಒದಗಿಸಲು ಸಾಧ್ಯವಾಗುತ್ತದೆ.

ಕೈಗಾರಿಕಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ, ಸ್ಥಾಪಿತ ಸಾಮ- ರ್ಥ್ಯದ ಪರಮಾವಧಿ ಪ್ರಯೋಜನ ಪಡೆಯಲು ಸಾಧ್ಯವಿರುವ ನೀತಿಯನ್ನು ಅನುಸರಿಸಬೇಕಾಗಿದೆ. ಅಂದರೆ ಲಭ್ಯವಿರುವ ಸಾಮರ್ಥ್ಯವನ್ನು ಸದ್ವಿನಿಯೋಗಿಸಿಕೊಂಡು, ಉತ್ಪಾದನೆ ಯನ್ನು ಹೆಚ್ಚಿಸಿಕೊಳ್ಳುವುದಕ್ಕೆ ಇರುವ ಎಲ್ಲ ಆರ್ಥಿಕ ನಿರ್ಬಂಧಗಳನ್ನೂ ತೊಡೆದುಹಾಕಬೇಕು. ಹಾಗೆ ಕೆಲವು ನಿರ್ಬಂಧಗಳೇನಾದರೂ ಅನಿವಾರ್ಯವೆನಿಸಿದರೆ ಅಂಥವನ್ನು ಅಧಿಕಾರಶಾಹಿಯಿಂದ ದೂರವಾದ ಮತ್ತು ನಿಷ್ಪಕ್ಷಪಾತ ವಾದ ಒಂದು ವರಿಷ್ಠ ಮಂಡಳಿಗೆ ಒಪ್ಪಿಸಿ ಆದಷ್ಟು ಬೇಗ ಪರಿಷ್ಕರಿಸಿಕೊಳ್ಳಬೇಕು. ಅಲ್ಪಉತ್ಪಾದನೆ ಮತ್ತು ಅಸಮ ಮರ್ಪಕ ನಿರ್ವಹಣೆಗೆ ಸಾಮಾನ್ಯವಾಗಿ ಅದಕ್ಷ ಆಡಳಿತವೂ ಕಾರಣವಾಗಿರುತ್ತದೆ. ಅದಕ್ಷ ಆಡಳಿತಕ್ಕೆ ಆಂತರಿಕವಾಗಿ ಸಂಘಟನಕಾರರು ಹೊಣೆಯಾಗಿರಬಹುದು ಮತ್ತು ಹೊರಗಿ ನಿಂದ ನಿಯಂತ್ರಣ ಮತ್ತು ನಿಯಂತ್ರಕರ ಒಂದು ದೊಡ್ಡ ಸಮೂಹವನ್ನೇ ಹೊಂದಿರುವ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮತ್ತು ಪುರಸಭೆಗಳ ಅಧಿಕಾರವರ್ಗ ಕಾರಣ ವಾಗಿರಬಹುದು. ಅಧಿಕಾರ ವರ್ಗ ದೇಶದ ಒಳಿತಿಗಾಗಿ

ಯಾದರೂ ತಮ್ಮ ಶುಷ್ಕ ಅಧಿಕಾರಶಾಹಿ ಮನೋಭಾವವನ್ನು ಬದಲಾಯಿಸಿಕೊಳ್ಳಬೇಕು; ತಮ್ಮನ್ನು ತಾವು ನಿಯಂತ್ರಿಸಿಕೊಳ್ಳುವುದನ್ನು ಅರಿಯಬೇಕು. ಪಕ್ಷಪಾತ ಧೋರಣೆಯನ್ನು ಕೈಬಿಟ್ಟು, ಲಕ್ಷಾಂತರ ಮಾನವ ದಿನಗಳು ಹಾಳಾಗುತ್ತಿರುವುದನ್ನು ತಪ್ಪಿಸಲು ಒಂದು ಉತ್ತಮವಾದ ಸೂತ್ರ-ಸನ್ನಾಹವನ್ನು ರೂಪಿಸಿಕೊಳ್ಳಬೇಕು.

ಅತಿಯಾದ ಹಣ ಬೇಡಿಕೆಯಿಂದಲೂ ಹಣದುಬ್ಬರ ಉಂಟಾಗುತ್ತದೆ ದಿಟ. ಆದರೆ ಇಂಥ ಬೇಡಿಕೆ ಸಾಮಾನ್ಯವಾಗಿ ಭೋಗವಸ್ತುಗಳ ಮತ್ತು ಅರೆಭೋಗ ವಸ್ತುಗಳ ಬೆಲೆ ಏರಿಕೆಗೆ ಕಾರಣವಾಗುತ್ತದೆ; ಇದರಿಂದ ಮೂಲಭೂತ ಆವಶ್ಯಕತೆಗಳ ಬೆಲೆ ಏರುವುದು ಕಡಿಮೆ. ನಿಯಮದ ಪ್ರಕಾರ ಹಣದ ಚಲಾವಣೆಯ ಹೆಚ್ಚಳದಿಂದ ಹೊಟ್ಟೆಬಟ್ಟೆಗೆ ತಾಪತ್ರಯವಿಲ್ಲದಿರುವವರ ವರಮಾನ ಅಧಿಕವಾಗುತ್ತದೆ. ಮೂಲಭೂತ ಆವಶ್ಯಕತೆಗಳ ಬೇಡಿಕೆ ಪೂರೈಕೆಗಳು ಏರುಪೇರಾದಾಗ ಹಣದ ಪೂರೈಕೆಯ ಇಳಿತಾಯದಿಂದ ಆ ವಸ್ತುಗಳ ಬೇಡಿಕೆ ಕುಗ್ಗುವುದಿಲ್ಲ.

ಪದಾರ್ಥಗಳ ಪೂರೈಕೆಯನ್ನು ಆಂತರಿಕ ಉತ್ಪಾದನೆಯಿಂದಾಗಲಿ, ಆಮದುಗಳಿಂದಾಗಲಿ ಹೆಚಿಸಲಾಗದಿದ್ದಾಗ, ಪರಿಸ್ಥಿತಿಯನ್ನು ನಿಭಾಯಿಸಿ ಬೇಡಿಕೆಯನ್ನು ಕುಗ್ಗಿಸುವುದನ್ನು ಬಿಟ್ಟರೆ ಅನ್ಯದಾರಿಯೇ ಇಲ್ಲದಿದ್ದಾಗ ಬೇಡಿಕೆಯನ್ನು ಕುಗ್ಗಿಸಲು ಇರುವ ಉತ್ತಮವಾದ ಮಾರ್ಗವೆಂದರೆ ಪಡಿತರವನ್ನು ಜಾರಿಗೆ ತರುವುದು. ಇದರಿಂದ ಅನುಭೋಗದ ಕಡಿತ ಸಾಮ್ಯವಾಗಿ ಹಂಚಲ್ಪಟ್ಟು ಬಡವರು ಮಾತ್ರ ಹೆಗಲು ಕೊಡಬೇಕಾದ ಪರಿಸ್ಥಿತಿ ಇಲ್ಲವಾಗುತ್ತದೆ.

## ಉದ್ಯೋಗಾವಕಾಶಗಳು

ಹಣದುಬ್ಬರದ ನಿವಾರಣೆಗಾಗಿ ಕೈಗೊಳ್ಳುವ ಕ್ರಮಗಳು ನಿರುದ್ಯೋಗವನ್ನು ಸೃಷ್ಟಿಸಿ ಬೆಳವಣಿಗೆಯನ್ನು ಕುಗ್ಗಿಸುತ್ತವೆ ಎಂದೇನೂ ಇಲ್ಲ. ಉತ್ಪಾದನೆ ಮತ್ತು ನೀಡಿಕೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಮಾಡುವ ದೃಢಪ್ರಯತ್ನಗಳು ಹೊಸ ಉದ್ಯೋಗಾವಕಾಶಗಳನ್ನು ಸೃಷ್ಟಿಸತೊಡಗುತ್ತವೆ. ಉದ್ಯಮ ಘಟಕ ಮತ್ತು ಕಾರ್ಖಾನೆಗಳು ಸಂಪೂರ್ಣವಾಗಿ ಕೆಲಸ ಮಾಡಿ, ವಿದ್ಯುತ್ ಉತ್ಪಾದನೆ ಹೆಚ್ಚಾಗಿ, ಕಾರ್ಮಿಕರು ತಮ್ಮ ಉತ್ಪತ್ತಿಯನ್ನು ಹೆಚ್ಚಿಸಿಕೊಂಡು, ಸಾರಿಗೆ-ಸಂಪರ್ಕ ಉತ್ತಮಗೊಂಡು, ರೈತರು ಹೆಚ್ಚುಹೆಚ್ಚಾಗಿ ಬೆಳೆದು ಜೊತೆಗೆ ಹೊಸ ಹೊಸ ವಿನಿಯೋಜನೆಗಳನ್ನು ಕೈಗೊಂಡ ಹಾಗೆಲ್ಲ ಉದ್ಯೋಗದ ಮಟ್ಟ ವೃದ್ಧಿಯಾಗುತ್ತ ಹೋಗುತ್ತದೆ. ಆದರೆ ಗಮನಿಸಬೇಕಾದ ಅಂಶವೆಂದರೆ, ಉದ್ಯೋಗ ಸೃಷ್ಟಿಯನ್ನು ಉದ್ಯೋಗಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಮುಂದುವರಿಸಬೇಕು.

ಪರಿಣಾಮಕಾರಿಯಾದ ಉದ್ಯೋಗ ನೀತಿಯನ್ನು ಅನುಸರಿಸುವಲ್ಲಿ ಹಣದುಬ್ಬರದ ಭೀತಿ ಎದುರಾಗುತ್ತದೆ. ನಿರುದ್ಯೋಗಿಗಳು ಉದ್ಯೋಗ ದೊರಕಿದ ಅನಂತರ ಹೆಚ್ಚು ಅನುಭೋಗಿಸತೊಡಗುತ್ತಾರೆ. ಪರಿಣಾಮವಾಗಿ ಬೇಡಿಕೆ ಕುದುರಿ ಬೆಲೆಗಳು ಏರುತ್ತವೆ. ಆದ್ದರಿಂದ, ಸಾಂಪ್ರದಾಯಿಕ ಅರ್ಥಶಾಸ್ತ್ರದ ಪ್ರಕಾರ ಹಣದುಬ್ಬರವನ್ನು ತಡೆಗಟ್ಟಬೇಕಾದರೆ ವೇತನ ನೀಡುವಿಕೆಯಿಂದ ಉಂಟಾಗಿರುವ ಬೇಡಿಕೆಯ ಹೆಚ್ಚಳವನ್ನು ತಗ್ಗಿಸಬೇಕು. ಇದಕ್ಕೆ ಸಂವಾದಿಯಾಗಿ ಅಧಿಕ ವರಮಾನವಿರುವವರ ಮೇಲೆ ಹೆಚ್ಚು ತೆರಿಗೆ ವಿಧಿಸುವುದರ ಮೂಲಕ ಇತರ ರಂಗಗಳಲ್ಲಿ ಉಂಟಾಗಿರುವ ಬೇಡಿಕೆಯ ಹೆಚ್ಚಳವನ್ನೂ ತಗ್ಗಿಸಬೇಕಾಗುತ್ತದೆ. ಆದರೆ ಭಾರತೀಯ ಸನ್ನಿವೇಶದಲ್ಲಿ ಸಾಂಪ್ರದಾಯಿಕ ನಿಲುಮೆಗೆ ಹೊರತಾಗಿ ವಿಚಾರ ಮಾಡಬಹುದಾಗಿದೆ. ನಮ್ಮಲ್ಲಿ ವರಮಾನ ಅಸಮಾನತೆಗಳು ವಿಪರೀತವಾಗಿವೆ. ಅನುಭೋಗದ ರೀತಿ ವೈವಿಧ್ಯಮಯವಾಗಿದೆ. ಪರಿಣಾಮವಾಗಿ, ಹೊಸ ಉದ್ಯೋಗಗಳು ಸೃಷ್ಟಿಯಾದಾಗ ಬೇಡಿಕೆ ಹೆಚ್ಚಾಗುವ ಪದಾರ್ಥಗಳು ತೆರಿಗೆ ಹೆಚ್ಚಾದಾಗ ಬೇಡಿಕೆ ಹೆಚ್ಚಾಗುವ ಪದಾರ್ಥಗಳಿಗಿಂತ ತೀರ ಭಿನ್ನವಾಗಿರುತ್ತವೆ. ಕೆಲಸಗಾರನ ವರಮಾನ ಹೆಚ್ಚು ವ್ಯಯವಾಗುವ ಮುಖ್ಯವಾದ ಬಾಬ್ತು ಎಂದರೆ ಆಹಾರವಾಗಿದೆ. ಆದರೆ ತೆರಿಗೆಗಳು ಹೆಚ್ಚಿದಾಗ ಆಹಾರದ ಬೇಡಿಕೆ ಕುಗ್ಗುವುದಿಲ್ಲ. ಬದಲಾಗಿ ಜನರು ಇತರ ವೆಚ್ಚಗಳನ್ನು ಕಡಿಮೆ ಮಾಡುತ್ತಾರೆ.

## ಜನಸಾಮಾನ್ಯರ ಸರಕುಗಳು

ಉದ್ಯೋಗ ಪ್ರೇರಿತ ಬೆಲೆಗಳ ಸ್ಥಿರತೆಯನ್ನು ವಿತ್ತ ನೀತಿಯ ಕ್ರಮಗಳಿಂದ ಸಾಧಿಸಲಾಗುವುದಿಲ್ಲ. ಈ ಕ್ರಮಗಳು ಒಟ್ಟು ಬೇಡಿಕೆಯ ಮೇಲೆ ಪ್ರಭಾವ ಬೀರುತ್ತವೆ. ಆದುದರಿಂದ ಬೆಲೆಗಳ ಸ್ಥಿರತೆಯನ್ನು ಕಾಪಾಡಿಕೊಳ್ಳಬೇಕಾಗಿದ್ದರೆ ಉದ್ಯೋಗ ಮಟ್ಟವನ್ನು ಹೆಚ್ಚಿಸುವ ಕ್ರಮಗಳ ಜೊತೆಯಲ್ಲಿಯೇ ಜನಸಾಮಾನ್ಯರ ಸರಕುಗಳ ನೀಡಿಕೆಯನ್ನೂ ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಈ ಸರಕುಗಳ, ಅದರಲ್ಲಿಯೂ ಆಹಾರಧಾನ್ಯಗಳ, ನೀಡಿಕೆ ವಿಪುಲವಾಗಿದ್ದ ಪಕ್ಷದಲ್ಲಿ ಉದ್ಯೋಗದ ಹೆಚ್ಚಳ ಹಣದುಬ್ಬರಕ್ಕೆ ಕಾರಣವಾಗುವುದಿಲ್ಲ.

## ಬೆಳವಣಿಗೆಗಳು

ಬೆಲೆಗಳ ಸ್ಥಿರತೆ ಮತ್ತು ಸಾಕಷ್ಟು ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ದೃಷ್ಟಿಯಿಂದ ಬೆಳವಣಿಗೆಯ ಗತಿ ತ್ವರಿತಗೊಳ್ಳಬೇಕು. ವಿಶೇಷವಾಗಿ ವೇತನದಾರರ ಅನುಭೋಗದ ಅಗತ್ಯಗಳನ್ನು ಪೂರೈಸುವಂತಹ ಉತ್ಪನ್ನಗಳನ್ನು ಹೆಚ್ಚಿಸಿಕೊಳ್ಳಬೇಕು. ಉತ್ಪಾದನೆ ಗಣನೀಯವಾಗಿ ಹೆಚ್ಚಾ

ಗುವುದರಿಂದ ಸಾಮಾಜಿಕ ಅಸಂತೃಪ್ತಿ ಮಾಯವಾಗಿ ಬೆಳವಣಿಗೆಯ ಹಾದಿ ಸುಗಮವಾಗುತ್ತದೆ.

ಅಧಿಕ ದರದ ಬೆಳವಣಿಗೆಯ ವಿಚಾರಕ್ಕೆ ಬಂದರೆ ಸಂಪನ್ಮೂಲಗಳ ಪ್ರಶ್ನೆ ಎದುರಾಗುತ್ತದೆ. ನಮ್ಮ ಸಂಪನ್ಮೂಲಗಳ ಕೊರತೆಗೆ ಅಲ್ಪ ಉಳಿತಾಯವೇ ಮುಖ್ಯವಾದ ಕಾರಣವೆಂದೂ ಆದುದರಿಂದ ಅಧಿಕ ದರದ ತೆರಿಗೆಯೇ ಸಂಪನ್ಮೂಲಗಳ ವೃದ್ಧಿಗೆ ಇರುವ ಏಕೈಕ ಮಾರ್ಗವೆಂದೂ ನಂಬಿದ್ದೇವೆ. ಈ ನಂಬಿಕೆಯನ್ನು ಕೊಂಚ ಒರೆಹಚ್ಚಿ ನೋಡುವುದು ಅವಶ್ಯ.

ಇತ್ತೀಚೆಗೆ, ಒಂದು ರಾಷ್ಟ್ರದಲ್ಲಿ ವಿವಿಧ ಅವಧಿಗಳಲ್ಲಿ ಉಂಟಾಗುವ ಬೆಳವಣಿಗೆಯನ್ನೂ ವಿವಿಧ ರಾಷ್ಟ್ರಗಳಲ್ಲಿ ಒಂದೇ ಅವಧಿಯಲ್ಲಿ ಉಂಟಾಗುವ ಬೆಳವಣಿಗೆಯನ್ನೂ ಪ್ರಚೋದಿಸುವ ಅಂಶಗಳನ್ನು ಕೆಲಮಟ್ಟಿಗೆ ವಿಶ್ಲೇಷಿಸಲಾಗಿದೆ. ಅಮೆರಿಕದ ಬ್ರೂಕಿಂಗ್ಸ್ ಸಂಸ್ಥೆ ನಡೆಸಿದ ಸಂಶೋಧನೆಯಿಂದ ಬೆಳಕಿಗೆ ಬಂದಿರುವ ಅಂಶ ಈ ರೀತಿ ಇದೆ: 1948ರಿಂದ 1969ರವರೆಗಿನ ಅವಧಿಯಲ್ಲಿ ಅಮೆರಿಕದ ಆರ್ಥಿಕ ಬೆಳವಣಿಗೆಯಲ್ಲಿ ಬಂಡವಾಳದ ಪಾಲು ಒಟ್ಟು ಬೆಳವಣಿಗೆಯ 1/5 ಭಾಗದಷ್ಟಿತ್ತು. ಕಾರ್ಮಿಕ ಉತ್ಪನ್ನ ಸುಧಾರಣೆಯಂತಹ ಇತರ ಅಂಶಗಳು ಬಂಡವಾಳಕ್ಕಿಂತಲೂ ಹೆಚ್ಚಿನ ಬೆಳವಣಿಗೆಗೆ ಕಾರಣವಾಗಿದ್ದುವು. ಹಾಗೆಯೇ 1953–1971ರ ಅವಧಿಯಲ್ಲಿ ಜಪಾನ್, ಪಶ್ಚಿಮ ಜರ್ಮನಿ, ಫ್ರಾನ್ಸ್, ಬೆಲ್ಜಿಯಮ್ ಮತ್ತು ಡೆನ್ಮಾರ್ಕ್ ದೇಶಗಳು ಅಮೆರಿಕಕ್ಕಿಂತಲೂ ಹೆಚ್ಚಿನ ದರದ ಬೆಳವಣಿಗೆಯನ್ನು ಸಾಧಿಸಿದ್ದುವು. ಆದರೆ ಯಾವ ದೇಶದಲ್ಲಿಯೂ ಬಂಡವಾಳದ ಪಾಲು ಗಮನಾರ್ಹವಾಗಿರಲಿಲ್ಲ. ಈಗ ನಮ್ಮ ಸ್ವಂತ ಅನುಭವವನ್ನೇ ತೆಗೆದುಕೊಳ್ಳೋಣ. ಉಳಿತಾಯಗಳು ಸೇಕಡ 22ರ ಮನೆ ಮುಟ್ಟಿದರೂ 1979–80ರಲ್ಲಿ ನಮ್ಮ ಬೆಳವಣಿಗೆಯ ದರ ಋಣಾತ್ಮಕವಾಗಿತ್ತು. ವಾಸ್ತವವಾಗಿ ಬಂಡವಾಳ ನಿರ್ಮಾಣ ಈಗಿನ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಇದ್ದಾಗ, ನಮ್ಮ ಬೆಳವಣಿಗೆಯ ಸ್ಥಿತಿಗತಿಗಳು ಈಗಿರುವುದಕ್ಕಿಂತಲೂ ಉತ್ತಮವಾಗಿದ್ದುವು. ಈ ಅಂಶವನ್ನು ಗುರುತಿಸಿಯೂ ಬಂಡವಾಳ ಮತ್ತು ಬೆಳವಣಿಗೆಗಳ ನಿಭಾಯಿಸಲಾಗದ ಸಂಬಂಧಕ್ಕೆ ಗಂಟು ಬೀಳುವುದೆಂದರೆ ಅದು ನಮ್ಮ ಎಚ್ಚರಗೇಡಿತನಕ್ಕೆ ಸಾಕ್ಷಿಯಾಗುತ್ತದೆ. ಭಾರತೀಯ ಅರ್ಥವ್ಯವಸ್ಥೆಯ ಒಂದು ದುರಂತ ಎಂದರೆ ಕೈಗೊಂಡಿರುವ ವಿನಿಯೋಜನೆಗಳಿಂದ ಅತ್ಯಂತ ನಿಕೃಷ್ಟ ಪ್ರತಿಫಲ ಪಡೆಯುತ್ತಿರುವುದು. ನಮ್ಮ ಇಂದಿನ ಹಾಗೂ ಹಿಂದಿನ ಅನುಭವಗಳ ಆಧಾರದ ಮೇಲೆ ಹೇಳುವುದಾದರೆ ತೆರಿಗೆಯ ಭಾರವನ್ನು ಹೆಚ್ಚಿಸದೆಯೇ, ನಿರ್ವಹಣೆ, ಶ್ರಮ, ಉತ್ಪನ್ನ ಮತ್ತು ತಾಂತ್ರಿಕತೆ—ಇಂತಹ ಮಾನವಿಕ ಅಂಶಗಳಿಗೆ ಪ್ರಾಶಸ್ತ್ಯ ನೀಡುವುದರ ಮೂಲಕ ಬೆಳವಣಿಗೆಯ ದರವನ್ನು ಹೆಚ್ಚಿಸಿಕೊಳ್ಳಬಹುದಾಗಿದೆ. ಇಂತಹ ಒಂದು ಜಾಗೃತ ಗುರಿ ಇರಿಸಿಕೊಳ್ಳುವುದಾದರೆ ವಿನಿಯೋಜನೆಯ ಪ್ರಮಾಣಕ್ಕಿಂತಲೂ ವಿನಿಯೋಜನೆಯಿಂದ ಪಡೆಯುವ ಪ್ರತಿಫಲಗಳಿಗೆ ವಿಶೇಷ ಗಮನ ಹರಿಸುವುದು ಅವಶ್ಯ. ಬೆಳವಣಿಗೆಯ ಹಾದಿಯಲ್ಲಿ ಶ್ರಮ ಪ್ರಧಾನ ಕೈಗಾರಿಕೆಗಳಿಗೆ ಆದ್ಯತೆ ನೀಡುವುದು ಅಗತ್ಯ.

**ಬೆಳವಣಿಗೆಯ ಯತ್ನ**

ಯೋಜನೆಯ ಪ್ರಾರಂಭದ ವರ್ಷಗಳಲ್ಲಿ ಒಂದು ಅಂಶದಷ್ಟು ಉತ್ಪಾದನೆಯನ್ನು ಪಡೆಯಲು 3.5 ಅಂಶಗಳಷ್ಟು ಬಂಡವಾಳ ಬೇಕಾಗುತ್ತಿತ್ತು. ಪ್ರಸ್ತುತ ಪ್ರಮಾಣ 6 : 1 ಆಗಿದೆ. ನಮ್ಮ ಬೆಳವಣಿಗೆಯ ಯತ್ನ ನಿರೀಕ್ಷಿಸಿದ ಫಲ ತರಬೇಕಾದರೆ ನಾವು ರೂಢಿಸಿಕೊಂಡಿರುವ ಎಲ್ಲಾ ತಾಂತ್ರಿಕ, ನಿರ್ವಾಹಕ, ಸಂಘಟನಾತ್ಮಕ ಮತ್ತು ಕಾರ್ಮಿಕ ನೈಪುಣ್ಯಗಳನ್ನು ಸದುಪಯೋಗಿಸಿಕೊಳ್ಳಬೇಕು. ಅನುಭೋಗಿ ಸರಕುಗಳ ಉತ್ಪಾದನೆಗೆ ಆದ್ಯತೆ ನೀಡಬೇಕು. ಇವುಗಳ ಉತ್ಪಾದನೆಯನ್ನು ಹೆಚ್ಚಿಸಲು ಅಧಿಕ ಪ್ರಮಾಣದ ಬಂಡವಾಳವನ್ನು ಹೊಂಚಿಕೊಳ್ಳುವ ಅಗತ್ಯ ಬರುವುದಿಲ್ಲ. ಆದರೆ ಉತ್ಪಾದಕರಿಗೆ ಪ್ರತಿಫಲ ಲಭ್ಯವಾಗುವಂತಹ ಬೆಲೆನೀತಿಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಅನುಭೋಗಿ ಸರಕುಗಳ ಉತ್ಪಾದನೆಯನ್ನು ವರ್ಧಿಸುವುದರಿಂದ ನಮ್ಮ ವಿದೇಶೀ ವಿನಿಮಯ ಸ್ಥಿತಿ ದೃಢವಾಗುತ್ತದೆ. ಈ ಸರಕುಗಳ ಅಭಾವ ಉಂಟಾದರೆ ಆಮದುಗಳು ಅನಿವಾರ್ಯವಾಗಿ, ವ್ಯಾಪಾರದ ಸಮತೋಲ ತಪ್ಪುತ್ತದೆ. ಆಧಿಕ್ಯ ಸಾಧಿಸಿದರೆ ಬೇಡಿಕೆ ನಿರಂತರವಾಗಿರುವುದರಿಂದ ಮಾರುಕಟ್ಟೆಯ ಸಮಸ್ಯೆ ಉದ್ಭವಿಸುವುದಿಲ್ಲ.

ಮೂಲಭೂತ ಅನುಭೋಗಿ ಸರಕುಗಳಿಗೆ ಆದ್ಯತೆ ಎಂದರೆ, ಹಿಂದೆ ಯಂತ್ರ ನಿರ್ಮಾಣ ಮತ್ತು ಬೃಹತ್ ಕೈಗಾರಿಕೆಗಳಿಗೆ ಆದ್ಯತೆ ನೀಡಿದ್ದು ತಪ್ಪು ಎಂದು ಅರ್ಥವಲ್ಲ. ಅನುಭೋಗಿ ಸರಕುಗಳ ಬೆಳವಣಿಗೆ ನಿರಂತರವಾಗಬೇಕಾದರೆ ಯಂತ್ರ ನಿರ್ಮಾಣ, ಮೂಲ ರಾಸಾಯನಿಕಗಳ ಉತ್ಪಾದನೆ, ರಸ ಗೊಬ್ಬರ ಹಾಗೂ ಕ್ರಿಮಿನಾಶಕಗಳ ತಯಾರಿಕೆ, ವಿದ್ಯುತ್ ಉತ್ಪಾದನೆ, ಹೊಸ ಹೊಸ ಶಕ್ತಿ ಸಾಧನಗಳ ಪರಿಶೋಧನೆ—ಇವುಗಳಿಗೆ ಬಂಡವಾಳ ವಿನಿಯೋಜಿಸುವುದು ಅವಶ್ಯವಾಗುತ್ತದೆ. ಆದರೆ ಇವುಗಳೇ ಅಂತಿಮ ಗುರಿಯಾಗಬಾರದು. ನಾವು ರೂಢಿಸಿಕೊಳ್ಳುವ ಸಾಧನ–ಸಾಮರ್ಥ್ಯಗಳು ಜನತೆಗೆ ಅವಶ್ಯವಿರುವ ಸರಕು-ಸಾಮಗ್ರಿಗಳ ಲಭ್ಯತೆಯನ್ನು ಹೆಚ್ಚಿಸಿಕೊಳ್ಳುವುದಕ್ಕೆ ಅಥವಾ ನೇರ

ವಾಗಿ ರಷ್ಟು ಬೇಡಿಕೆಗಳನ್ನು ಕುದುರಿಸುವುದಕ್ಕೆ ಬೆಂಬಲ ವಾಗಿರಬೇಕು. ಆದರೆ ವಿಷಾದದ ಸಂಗತಿ ಎಂದರೆ ಅನುಭೋಗಿ ಸರಕುಗಳ ಉತ್ಪಾದನೆಯನ್ನು ಮೆಟ್ಟಿ ಈಗಾಗಲೆ ರೂಢಿಸಿಕೊಂಡಿರುವ ಯಂತ್ರ ನಿರ್ಮಾಣ ಸಾಮರ್ಥ್ಯ ಸದ್ವಿನಿಯೋಗವಾಗದೆ ಉಳಿದಿರುವುದು.

ನೀಗಲಾಗದ ಕೊರತೆಗಳಿಗೆ ಹೊಂದಿಕೊಳ್ಳುವಂತೆ ಜನತೆಯನ್ನು ಓಲೈಸುವುದು ಸಹನೀಯ. ಆದರೆ ನೀಗಬಹುದಾದ ಕೊರತೆಗಳು ಶಾಶ್ವತಗೊಳ್ಳುವುದಕ್ಕೆ ಬಿಡುವುದು ಅಸಹನೀಯ. ನಾವು ರೂಢಿಸಿಕೊಂಡಿರುವ ಸಾಧನ-ಸಾಮರ್ಥ್ಯಗಳು ಸ್ಥಿತಿಗತಿಗಳಿಗೆ ತಕ್ಕಂತಿರಬೇಕು. ಗಳಿಸುವ ಸಿದ್ಧಿ-ಸಾಧನೆಗಳು ಆಶೋತ್ತರಗಳಿಗೆ ಹೊಂದಿಕೊಳ್ಳಬೇಕು. ಬಲ್ಲಿದರಿಂದ ಬಡವರಿಗೆ ವರಮಾನ ವರ್ಗಾಯಿಸುವುದರಿಂದ ಜನತೆಯ ಬಡತನ ನಿವಾರಣೆ ಸಾಧ್ಯವಿಲ್ಲ. ಬಡವರು ಬೇಡುವ ಮತ್ತು ಸಿರಿವಂತರೂ ಉಪಯೋಗಿಸಬಹುದಾದ ಸರಕುಗಳ ಉತ್ಪಾದನೆ ಕುದುರದ ಹೊರತು ವರಮಾನ ವಿತರಣೆ ಅಥವಾ ವರ್ಗಾವಣೆ ಕೇವಲ ಬೆಲೆ ಏರಿಕೆಗೆ ಕಾರಣವಾಗುತ್ತದೆ ಅಷ್ಟೆ.

ಹಣದುಬ್ಬರ, ನಿರುದ್ಯೋಗ ಮತ್ತು ಬೆಳವಣಿಗೆ— ಈ ವಿಚಾರಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಅವಲೋಕಿಸಬಾರದು. ಇವುಗಳಲ್ಲಿ ಒಂದರ ಬಗ್ಗೆ ಮಾಡಿದ ಪ್ರಯತ್ನಗಳು ಉಳಿದೆರಡರ ಮೇಲೆ ಪ್ರತಿಕ್ರಿಯೆ ಉಂಟುಮಾಡುತ್ತವೆ. ಆದುದರಿಂದ ಸ್ಥಿರತೆ, ಉದ್ಯೋಗ ಮತ್ತು ಬೆಳವಣಿಗೆಗಾಗಿ ಒಂದು ಸಮಗ್ರವಾದ ತಂತ್ರವನ್ನು ರೂಪಿಸಿಕೊಳ್ಳುವುದು ಅತ್ಯಾವಶ್ಯಕವಾಗಿದೆ.

# ಹಣದುಬ್ಬರ ಮತ್ತು ರಿಸರ್ವ್ ಬ್ಯಾಂಕ್ ನೀತಿ

ವೈ. ಎಸ್. ಉಷಾ

### ಸಮನ್ವಯ ಸಮಿತಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ ಪ್ರಬಂಧಗಳಲ್ಲಿ ಒಂದು

ನಮ್ಮ ದೇಶದ ಹಣಕಾಸಿನ ವ್ಯವಹಾರವನ್ನು ಕ್ರಮಗೊಳಿಸಿ ನಡೆಸುವುದು ಮತ್ತು ಆ ಮೂಲಕ ನಾಡಿನ ಆರ್ಥಿಕ ಸ್ಥಿರತೆ ಉಳಿದುಕೊಳ್ಳುವಂತೆ ನೋಡಿಕೊಳ್ಳುವುದು ನಮ್ಮ ಕೇಂದ್ರ ಬ್ಯಾಂಕಾದ ಭಾರತೀಯ ರಿಸರ್ವ್ ಬ್ಯಾಂಕಿನ ಹೊಣೆ. ಹಣದುಬ್ಬರದಂಥ ಗಂಭೀರ ಸಮಸ್ಯೆಗೆ ರಿಸರ್ವ್ ಬ್ಯಾಂಕಿನ ನೀತಿಗಳಿಂದ ಏನಾದರೂ ಪರಿಹಾರವಿದೆಯೇ ಎಂಬುದು ಕುತೂಹಲಕಾರಿಯಾದ ವಿಷಯವಾಗಿದೆ.

ಹಣದ ಯಂತ್ರವನ್ನು ಕ್ರಮಗೊಳಿಸಬೇಕಾದರೆ ಒಟ್ಟು ದೇಶದಲ್ಲಿರುವ ಹಣಮಂಡಲವನ್ನೂ ಬ್ಯಾಂಕಿಂಗ್ ಮತ್ತು ಉದರಿ ಮಂಡಲಗಳನ್ನೂ ಬ್ಯಾಂಕ್ ತನ್ನ ಕೈಯಲ್ಲಿಟ್ಟು ಕೊಂಡು ಆಳಬೇಕು. ಇದರಿಂದಾಗಿ ಅದಕ್ಕೆ ನೋಟ್ ಚಲಾವಣೆಯ ಏಕಾಧಿಕಾರವನ್ನು ಕೊಡಲಾಗಿದೆ. ಹಾಗೆಯೇ ಅದು ನಾಡಿನ ವಾಣಿಜ್ಯ ಬ್ಯಾಂಕುಗಳಿಗೂ ಕೆಲವು ರಾಜ್ಯ ಸಹಕಾರ ಬ್ಯಾಂಕುಗಳಂಥ ಲೇವಾದೇವಿ ಸಂಸ್ಥೆಗಳಿಗೂ ಬ್ಯಾಂಕರ್ ಆಗಿ ಅವರ ನಗದು ಹಣಗಳ ನಿಧಿಯನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತದೆ.

ಬ್ಯಾಂಕುಗಳು ಒದಗಿಸುವ ಉದರಿ ಹಣವನ್ನು ರಿಸರ್ವ್ ಬ್ಯಾಂಕು ನಿಯಂತ್ರಿಸಬಹುದು ಹಾಗೂ ಚಾಲ್ತಿ ಹಣವನ್ನು ಕಡಿಮೆ ಮಾಡುವುದರ ಮೂಲಕ ಹಣಕಾಸಿನ ಪರಿಸ್ಥಿತಿಯನ್ನು ನಿಯಂತ್ರಿಸಬಹುದಾಗಿದೆ.

ನಾಡಿನ ಆರ್ಥಿಕ ಅಗತ್ಯಗಳಿಗೆ ಸಾರ್ವಜನಿಕರ ಕೈಯಲ್ಲಿರುವ ಹಣದ ಮೊತ್ತದ ಒದಗಣೆಯನ್ನು ಒಂದು ಕ್ರಮದಲ್ಲಿ ಬ್ಯಾಂಕು ನಡೆಸುವುದು. ಹಣಕ್ಕೆ ಸಂಬಂಧಿಸಿದ ಸ್ಥಿತಿಗತಿಗಳ ಮೇಲೆ ಬ್ಯಾಂಕಿನ ಧೋರಣೆಗಳೇ ಅನೇಕ ವೇಳೆ ಪ್ರಭಾವ ಬೀರುವುವು. ಚಾಲ್ತಿ ಹಣದ ಒದಗಣೆಯ ಮೇಲೆ ರಿಸರ್ವ್ ಬ್ಯಾಂಕಿನ ನಿಯಂತ್ರಣ ಬಂದಿರುವುದರಿಂದ ಜನರ ಕೈಯಲ್ಲಿ ಎಷ್ಟು ಪರಿಮಾಣದ ಹಣವಿರಬೇಕೆಂಬುದನ್ನು ಅದು ನಿರ್ಣಯಿಸುವ ಸ್ಥಿತಿಯಲ್ಲಿರುತ್ತದೆ. ಆದ್ದರಿಂದ ರಿಸರ್ವ್ ಬ್ಯಾಂಕು ಚಾಲ್ತಿ ಹಣವನ್ನು ನಿಯಂತ್ರಿಸುವುದರ ಮೂಲಕ ಹಣದ ಅಧಿಕ ಪ್ರಸರಣವನ್ನು ಸ್ವಲ್ಪ ಮಟ್ಟಿಗೆ ನಿಯಂತ್ರಿಸಬಹುದಾಗಿದೆ.

## ರಿಸರ್ವ್ ಬ್ಯಾಂಕಿನ ಅಸ್ತ್ರಗಳು

ಇದಲ್ಲದೆ, ಹಣದ ಒದಗಣೆಯನ್ನು ಕಟ್ಟಿಗೆ ಒಳಪಡಿಸುವುದಕ್ಕೆ ರಿಸರ್ವ್ ಬ್ಯಾಂಕಿನ ಕೈಯಲ್ಲಿ ಅನೇಕ ಸಾಧನಗಳಿವೆ. ಇವು ಎಲ್ಲ ಕೇಂದ್ರೀಯ ಬ್ಯಾಂಕುಗಳ ಕೈಯಲ್ಲಿಯೂ ಸಾಧಾರಣವಾಗಿ ಇರುವ ಸಾಧನಗಳೇ. ಇವೆಂದರೆ—

1 ಬ್ಯಾಂಕ್ ದರವನ್ನು ವ್ಯತ್ಯಾಸ ಮಾಡುವುದು

2 ಬಹಿರಂಗ ಪೇಟೆಯಲ್ಲಿ ಪತ್ರಗಳನ್ನು ಕೊಳ್ಳುವ, ಮಾರುವ ವ್ಯವಹಾರಗಳು

3 ಬ್ಯಾಂಕುಗಳು ತನ್ನಲ್ಲಿಡಬೇಕಾದ ನಗದು ಹಣಗಳ ಅನುಪಾತದಲ್ಲಿ ಮಾಡುವ ವ್ಯತ್ಯಾಸಗಳು

ಇವು ಮೂರಕ್ಕೂ ಅತೀ ಹತ್ತಿರದ ಅನ್ಯೋನ್ಯ ಸಂಬಂಧವುಂಟು. ಇವನ್ನು ಒಟ್ಟಿಗೆ ಸಮರಸದಲ್ಲಿ ನಡೆಸಬೇಕೆಂಬ ಸಂಗತಿಯನ್ನು ಒತ್ತಿ ಹೇಳಬಹುದು. ಇವೆಲ್ಲವೂ ಬ್ಯಾಂಕಿನ ನಿಧಿಗಳ ಮಟ್ಟವನ್ನು ಹೆಚ್ಚು ಕಡಿಮೆ ಮಾಡುತ್ತವೆ. ಬಹಿರಂಗ ಪೇಟೆಯ ವ್ಯವಹಾರವೂ ನಗದು ನಿಧಿಯ ನಿರ್ಬಂಧಗಳೂ ನಿಧಿಯ ಹದಿಯನ್ನು ಮಾರ್ಪಡಿಸುವುವು. ಬ್ಯಾಂಕ್ ದರ ಕೆಲಸ ಮಾಡುವುದು ಪರೋಕ್ಷವಾಗಿ. ನಗದು ಹಣದ ನಿಧಿಗಳನ್ನು ಪಡೆಯಲು ತೆರಬೇಕಾದ ಬೆಲೆಯನ್ನು ಹೆಚ್ಚು ಕಡಿಮೆ ಮಾಡುವುದರ ಮೂಲಕ ಬ್ಯಾಂಕ್ ದರ ಪ್ರಭಾವ ಬೀರುವುದು.

### ಬ್ಯಾಂಕ್ ದರ

ಬ್ಯಾಂಕ್ ದರ ನೀತಿ ರಿಸರ್ವ್ ಬ್ಯಾಂಕಿನ ಉದರಿ ನಿಯಂತ್ರಣದ ಒಂದು ಅಸ್ತ್ರವಾಗಿದೆ. ಹೇಗೆಂದರೆ, ರಿಸರ್ವ್ ಬ್ಯಾಂಕು ಹಣದುಬ್ಬರ ಹೆಚ್ಚಿದಾಗ 'ಹಣದ ಅತಿಯಾದ ಪ್ರಸರಣ ತಡೆಯಲು ವಾಣಿಜ್ಯ ಬ್ಯಾಂಕುಗಳ ಬಡ್ಡಿ ದರ ಹೆಚ್ಚಿಸುತ್ತದೆ. ಆಗ ಸಹಜವಾಗಿಯೇ ಬ್ಯಾಂಕುಗಳ ಬಳಿ ನಗದು ಹಣ ಕಡಿಮೆಯಾಗಿ ಅವುಗಳ ಉದರಿ ವ್ಯಾಪ್ತಿಯೂ ಕಡಿಮೆಯಾಗಿ ಜನರಿಗೆ ಹಣದ ಒದಗಣೆ ಕಡಿಮೆಯಾಗುತ್ತದೆ. ಉದಾ: ಎರಡನೆಯ ಮಹಾ ಯುದ್ಧ ಹಾಗೂ ಅನಂತರದ ಮೊದಲ ಕೆಲವು ವರ್ಷಗಳಲ್ಲಿ ನಗದು ಹಣ ಹೆಚ್ಚಾಗಿರುತ್ತಿತ್ತು. ಕೈಗಾರಿಕೆ ಸ್ಥಾಪಿಸಲು ವಿಪರೀತ ನಿಬಂಧನೆಗಳಿದ್ದದ್ದರಿಂದ ಯಾರೂ ಕೈಗಾರಿಕೆಗಳನ್ನು ಸ್ಥಾಪಿಸಲು ಮುಂದೆ ಬರುತ್ತಿರಲಿಲ್ಲ. ಹೀಗಾಗಿ ಬ್ಯಾಂಕುಗಳ ಬಳಿ ಪುಷ್ಕಳವಾಗಿ ಹಣವಿರುತ್ತಿತ್ತು. ಅನಂತರದ ಕೆಲವು ವರ್ಷಗಳಲ್ಲಿ ಬ್ಯಾಂಕು ಉದರಿಗೆ ಬೇಡಿಕೆ ಹೆಚ್ಚಾದಾಗ ಬ್ಯಾಂಕುಗಳು ತಮ್ಮಲ್ಲಿದ್ದ ಸರ್ಕಾರಿ ಸಾಲಪತ್ರಗಳನ್ನು ಮಾರಿ ಹಣ ಗಳಿಸಿಕೊಂಡುವು. ಬಡ್ಡಿ ದರ ಕಡಿಮೆಯಿದ್ದುದರಿಂದ ಉದರಿ ಹಣದ ಬೇಡಿಕೆ ಹೆಚ್ಚಾದಾಗಲೂ ಬ್ಯಾಂಕುಗಳು ರಿಸರ್ವ್ ಬ್ಯಾಂಕ್ ಬಳಿ ಹೋಗಲಿಲ್ಲ. ಹೆಚ್ಚಾಗಿದ್ದ ಹಣದ ಚಲಾವಣೆಯನ್ನು ತಡೆಗಟ್ಟುವ ಸಲುವಾಗಿ ರಿಸರ್ವ್ ಬ್ಯಾಂಕು ಬ್ಯಾಂಕ್ ದರವನ್ನು 1951ರಲ್ಲಿ 3%ರಿಂದ $3\frac{1}{2}$%ಗೆ ಏರಿಸಿತು. ಹಾಗೆಯೇ ಏರಿಸುತ್ತ ಬಂದು 1951ರಿಂದ 1973ರ ವರೆಗೆ ರಿಸರ್ವ್ ಬ್ಯಾಂಕು ಬ್ಯಾಂಕ್ ದರವನ್ನು 9%ಕ್ಕೆ ಏರಿಸಿದೆ.

### ಬಹಿರಂಗ ಮಾರುಕಟ್ಟೆಯ ವ್ಯವಹಾರ

ರಿಸರ್ವ್ ಬ್ಯಾಂಕು ಹಣದುಬ್ಬರ ಹೆಚ್ಚಾಯಿತು ಎನಿಸಿದಾಗ ಬಹಿರಂಗ ಮಾರುಕಟ್ಟೆ ವ್ಯವಹಾರ ನಡೆಸುತ್ತದೆ. ಎಂದರೆ ಜನರ ಬಳಿಯಿರುವ ಅಧಿಕ ಹಣವನ್ನು ಸಂಗ್ರಹಿಸುವ ಸಲುವಾಗಿ ಕೇಂದ್ರ ಸರ್ಕಾರದ ಇಲ್ಲವೇ ರಾಜ್ಯ ಸರ್ಕಾರದ ಯಾವ ವಾಯಿದೆ ಪತ್ರಗಳನ್ನಾಗಲಿ, ಇಲ್ಲವೆ ಸ್ಟೇಟ್ ಬ್ಯಾಂಕಿನ ಯಾವುದೇ ವಾಯಿದೆ ಪತ್ರವನ್ನಾಗಲಿ ಇಲ್ಲವೆ ಬಂಡವಾಳ ಪತ್ರಗಳನ್ನಾಗಲಿ ಮಾರಾಟ ಮಾಡುತ್ತದೆ. ಹಾಗೆಯೇ ಇವನ್ನು ಕೆಲ ಸಂದರ್ಭಗಳಲ್ಲಿ ಕೊಳ್ಳುವುದರ ಮೂಲಕವೂ ಹಣದ ಪ್ರಸರಣವನ್ನು ನಿಯಂತ್ರಿಸುತ್ತದೆ.

### ನಗದು ಸಿಲ್ಕು

ಬ್ಯಾಂಕುಗಳ ನಗದು ಸಿಲ್ಕು ಹಣದ ಅನುಪಾತವನ್ನು ವ್ಯತ್ಯಾಸ ಮಾಡುವುದರ ಮೂಲಕವೂ ರಿಸರ್ವ್ ಬ್ಯಾಂಕು ಉದರಿಯನ್ನು ನಿಯಂತ್ರಿಸಬಹುದಾಗಿದೆ. ಎಲ್ಲಾ ಬ್ಯಾಂಕುಗಳು ತಮ್ಮ ಸಾವಧಿ ಠೇವಣಿಗಳ ಒಟ್ಟು ಹಣದ (ವಾಯಿದೆ ದೇಣಿಯ) ಸೇ. 2ರಷ್ಟನ್ನು ಹಾಗೂ ಚಾಲ್ತಿ ದೇಣಿಯ (ಎಂದರೆ ಕಾಲಕಾಲಕ್ಕೆ ಗ್ರಾಹಕರ ಬೇಡಿಕೆಯಂತೆ ಪಾವತಿ ಮಾಡಬೇಕಾದ ಹಣ) ಸೇ. 5ರಷ್ಟನ್ನು ರಿಸರ್ವ್ ಬ್ಯಾಂಕಿನಲ್ಲಿ ಠೇವಣಿಯಾಗಿ ಇಡಬೇಕೆಂಬ ವಿಧಿಯಿದೆ. 1962ರ ತಿದ್ದುಪಡಿಯಂತೆ ಈ ಠೇವಣಿಯನ್ನು ಸೇ. 15ಕ್ಕಿಂತ ಹೆಚ್ಚಿಸಬಾರದೆಂದು ಆಗಿದೆ. ಒಟ್ಟಿನಲ್ಲಿ ನಗದು ಸಿಲ್ಕು ಹಣದ ವ್ಯತ್ಯಾಸದಿಂದ ರಿಸರ್ವ್ ಬ್ಯಾಂಕು ಉದರಿ ನಿಯಂತ್ರಣವನ್ನು ಸಾಧಿಸಬಹುದಾಗಿದೆ.

### ಇತರ ವಿಧಾನಗಳು

ಕೆಲವು ಬಾರಿ ರಿಸರ್ವ್ ಬ್ಯಾಂಕು ಬ್ಯಾಂಕುಗಳಿಗೆ ಸಲಹೆ ಸೂಚನೆಗಳನ್ನೂ ನಿರ್ದೇಶನಗಳನ್ನೂ ಕೊಡುವುದರ ಮೂಲಕವೂ ಉದರಿ ನಿಯಂತ್ರಣವನ್ನು ಸಾಧಿಸಬಹುದಾಗಿದೆ. ಅದೇ ಆರಿಸಿದ ಹಾಗೂ ನೇರವಾದ ನಿಯಂತ್ರಣ ವಿಧಾನ. ಉದಾ: 1956ರಲ್ಲಿ ಬ್ಯಾಂಕುಗಳಿಗೆ ನಿರ್ದೇಶನ ಕಳಿಸಿ, ಬತ್ತ ಅಕ್ಕಿಗಳ ಮೇಲೆ ಕೊಡುವ ಮುಂಗಡಗಳನ್ನು ಬಿಗಿ ಮಾಡಬೇಕೆಂದು ಈ ಸರಕುಗಳ ಮೇಲಿನ ಮುಂಗಡಗಳ ಹೊರಮಿತಿಯನ್ನು ಗೊತ್ತು ಮಾಡಿತು. ಅನಂತರ ಹುರುಳಿ ಮುಂತಾದ ದ್ವಿದಳ ಧಾನ್ಯಗಳು ಹಾಗೂ ಹತ್ತಿಯ ಕೈಗಾರಿಕೆಗಳಿಗೆ ಕೊಡುವ ಮುಂಗಡಗಳ ಮೇಲೂ ಇದೇ ನಿಯಂತ್ರಣ ವ್ಯಾಪಿಸಿತು. ಈ ಬಗೆಯ ಉದರಿ ನಿಯಂತ್ರಣ ಅಗತ್ಯಕ್ಕೆ ತಕ್ಕಂತೆ ತಿರುಗಿಸಿಕೊಳ್ಳಬಲ್ಲ ಗುಣವುಳ್ಳದ್ದಾಗಿದೆ. ಇದನ್ನು ಮುಂದುವರಿಸುವುದು ಅಗತ್ಯವಿಲ್ಲವೆಂಬ ಪರಿಸ್ಥಿತಿ ಕಂಡೊಡನೆ, ಇಲ್ಲವೇ ಮಾರ್ಪಡಿಸಬೇಕಾಗಿ ಬಂದ ಕೂಡಲೆ ಈ ನಿರ್ಬಂಧವನ್ನು ತೆಗೆಯಲಾಯಿತು.

ಇದಲ್ಲದೆ ರಿಸರ್ವ್ ಬ್ಯಾಂಕು ಬ್ಯಾಂಕುಗಳಿಗೆ ನೈತಿಕವಾಗಿ ಪ್ರೇರಣೆ ನೀಡುತ್ತದೆ, ಎಂದರೆ ಅದು ಅಗತ್ಯದ ಸಮಯದಲ್ಲಿ ಬ್ಯಾಂಕರುಗಳನ್ನು ಕೂಡಿಸಿಕೊಂಡು ಚರ್ಚಿಸಿ ಅವರನ್ನು ನಯವಾಗಿ ಮಾತನಾಡಿಸಿ ಮನ ಒಲಿಸಿ ಬ್ಯಾಂಕ್ ಉದರಿ ನಿಯಂತ್ರಿಸಬಹುದಾಗಿದೆ. ಸಾಮಾನ್ಯವಾಗಿ ಎಲ್ಲಾ ಬ್ಯಾಂಕುಗಳು ರಿಸರ್ವ್ ಬ್ಯಾಂಕಿನ ಸಲಹೆಗಳನ್ನು ಸ್ವೀಕರಿಸುತ್ತವೆ. ಅವು ಹಾಗೆ, ಮಾಡದಾದಾಗ ರಿಸರ್ವ್ ಬ್ಯಾಂಕು ತನಗೆ ದತ್ತವಾದ 'ನೇರಕ್ರಮ'ವನ್ನು(ಶಾಖಾ ವಿಸ್ತರಣೆ ನಿಯಂತ್ರಣ, ನಗದು ನಿಧಿ ಏರಿಕೆ ಮುಂತಾದವು) ಕೈಗೊಂಡು ಅವುಗಳನ್ನು ದಾರಿಗೆ ತರಬಹುದಾಗಿದೆ.

ಇಷ್ಟೆಲ್ಲ ಇದ್ದರೂ ಹಣದ ಒದಗಣೆಯ ನಿಯಂತ್ರಣ ಪೂರ್ತಿ ಅಥವಾ ಬಹುಮಟ್ಟಿಗೆ ಬ್ಯಾಂಕಿನ ಹತೋಟಿಯಲ್ಲಿಯೆ

ಇದೆಯೆನ್ನಲಾಗದು. ಏಕೆಂದರೆ ಸರ್ಕಾರದ ಹಣಕಾಸಿನ ಕಾರ್ಯಕಲಾಪಗಳು ಇದನ್ನು ಬಹುವಾಗಿ ಮಾರ್ಪಡಿಸುತ್ತವೆ. ಈ ವಿಷಯದಲ್ಲಿ ಸರ್ಕಾರಕ್ಕೆ ಸಲಹೆ ಸಲ್ಲಿಸುವ ಅನೇಕ ಅವಕಾಶಗಳು ರಿಸರ್ವ್ ಬ್ಯಾಂಕಿಗೆ ಇರುವುವಾದರೂ ಸರ್ಕಾರದ ಮೇಲೆ ಬ್ಯಾಂಕಿಗೆ ಯಾವ ಹತೋಟಿಯೂ ಇಲ್ಲ. ದೇಶದ ಅಂತರರಾಷ್ಟ್ರೀಯ ವ್ಯವಹಾರಗಳ ಕಾರಣದಿಂದಲೂ ಬ್ಯಾಂಕಿನ ಧಾರಾಳತೆ ಕಡಿಮೆಯಾಗುವುದು. ಏಕೆಂದರೆ ವಿದೇಶಿ ವ್ಯಾಪಾರ ವ್ಯವಹಾರಗಳು ಹಣದ ಒದಗಣೆಯನ್ನು ನಿರ್ಧರಿಸುವ ಇನ್ನೊಂದು ಪ್ರಭಾವ. ಒಟ್ಟಿನಲ್ಲಿ ಕೇಂದ್ರೀಯ ಬ್ಯಾಂಕಿನ ಸ್ವಂತ ಧೋರಣೆಗಳಿಗಿಂತ ಸರ್ಕಾರದ ಆರ್ಥಿಕ ಧೋರಣೆ ರಚಿಸುವ ವ್ಯವಹಾರಗಳ ನಮೂನೆ ಸಾಮಾನ್ಯ ಹಣದ ಪರಿಸ್ಥಿತಿಯನ್ನು ನಿಯಂತ್ರಿಸುವುದರಲ್ಲಿ ಹೆಚ್ಚು ಮುಖ್ಯವಾದ ಪ್ರಭಾವಶಾಲಿಯಾಗುತ್ತದೆ. ಏಕೆಂದರೆ ಬ್ಯಾಂಕು ಸರ್ಕಾರಕ್ಕೆ ಕೊಡಬೇಕಾದ ಕೈಗಡಕ್ಕೆ ಶಾಸನದ ಪ್ರಕಾರ ಯಾವ ಮಿತಿಯೂ ಇಲ್ಲದಿರುವುದು ಇಲ್ಲಿನ ಒಂದು ವಿಶೇಷ. ಆದ್ದರಿಂದ ಹಣದ ಹದವನ್ನು ಕಾಪಾಡಬೇಕಾದರೆ ಸರ್ಕಾರದ ಸಹಕಾರ ಎಷ್ಟು ಮುಖ್ಯವೆಂಬುದು ಇದರಿಂದ ತಿಳಿಯುತ್ತದೆ.

# ಅಭಿವೃದ್ಧಿಶೀಲ ರಾಷ್ಟ್ರಗಳ ವಿದೇಶಿ ಸಾಲಗಳ ಹೊಣೆಯ ಕೆಲವು ಪ್ರಮುಖ ಸಮಸ್ಯೆಗಳು

**ಸಿ. ಕೆ. ರೇಣುಕಾರ್ಯ**

**ವಿದೇಶಿ ನೆರವಿನ ಸಾಧಕಬಾಧಕಗಳನ್ನೂ ಅಭಿವೃದ್ಧಿಗಾಗಿ ಅದನ್ನು ಬಳಸಿಕೊಳ್ಳು ವುದರಲ್ಲಿ ಎದುರಾಗುವ ನಾನಾ ಸಮಸ್ಯೆಗಳನ್ನೂ ಲೇಖಕರು ಇಲ್ಲಿ ಆಧಾರಸಹಿತ ವಾಗಿ ವಿವೇಚಿಸಿ, ಸ್ವಾವಲಂಬನೆಯ ಅಗತ್ಯವನ್ನು ಒತ್ತಿ ಹೇಳಿದ್ದಾರೆ.**

ವಿಶ್ವದ ಅಭಿವೃದ್ಧಿಶೀಲ ರಾಷ್ಟ್ರಗಳ ವಿದೇಶಿ ನೆರವಿನ ಬೇಡಿಕೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲೇ ನಡೆದಿದೆ. ಈ ರಾಷ್ಟ್ರಗಳ ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಇದು ಅನಿವಾರ್ಯವೂ ಹೌದು. ತಮ್ಮ ಆರ್ಥಿಕ ಯೋಜನೆ ಗಳನ್ನು ಕಾರ್ಯಗತಗೊಳಿಸಲು ಮತ್ತು ಹಿಂದಿನ ಋಣ ಭಾರವನ್ನು ಸ್ವಲ್ಪಮಟ್ಟಿಗೆ ಪರಿಹರಿಸಿಕೊಳ್ಳಲು ಹಾಗೂ ವಿದೇಶೀ ವಾಣಿಜ್ಯ ಕೊರತೆಯನ್ನು ಹೋಗಲಾಡಿಸಿಕೊಳ್ಳಲು ಎಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳೂ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದಲೂ ಅಭಿವರ್ಧಿತ ರಾಷ್ಟ್ರಗಳಿಂದಲೂ ಅಂತರರಾಷ್ಟ್ರೀಯ ಬಂಡವಾಳ ಮಾರುಕಟ್ಟೆಯಿಂದಲೂ ವರ್ಷಂಪ್ರತಿ ವಿದೇಶೀ ನೆರವನ್ನು ಪಡೆಯುತ್ತವೆ. ಕೋಷ್ಟಕ 1ರಲ್ಲಿ ರಾಷ್ಟ್ರಗಳ ವಿದೇಶೀ ಸಾಲ ಪರಿಸ್ಥಿತಿಯನ್ನು ತೋರಿಸಲಾಗಿದೆ.

ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ವಿದೇಶಿ ಸಾಲ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ತುಂಬ ಅನುಕೂಲಕರವೇನೋ ಹೌದು. ಏಕೆಂದರೆ ರಾಷ್ಟ್ರದ ಬಂಡವಾಳಹೂಡಿಕೆಯನ್ನು ಅಭಿವೃದ್ಧಿಗೊಳಿಸಿ, ಆರ್ಥಿಕ ಅಭಿವೃದ್ಧಿ ವೇಗವಾಗಿ ನಡೆಯು ವುದಕ್ಕೆ ವಿದೇಶಿ ನೆರವು ಬಹುಮಟ್ಟಿಗೆ ಸಹಾಯಕ ವಾಗುತ್ತದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳು ಎಷ್ಟರ ಮಟ್ಟಿಗೆ ಋಣಭಾರವನ್ನು ಹೊರಬಲ್ಲವು ಎಂಬುದನ್ನು ಈ ಅನುಕೂಲಕರವಾದ ಅಂಶ ಅವಲಂಬಿಸುತ್ತದೆ. ಏಕೆಂದರೆ ಪ್ರತಿ ವರ್ಷ ತನ್ನ ಸಾಲದ ಹೊಣೆಯನ್ನು ತೀರಿಸಲು ಪ್ರತಿ

ಕೋಷ್ಟಕ 1—**ರಾಷ್ಟ್ರಗಳ ವಿದೇಶಿ ಸಾಲ ಪರಿಸ್ಥಿತಿ** (ದಶಲಕ್ಷ ಡಾಲರ್‌ಗಳಲ್ಲಿ)

| ರಾಷ್ಟ್ರಗಳು | ವರ್ಷ 1974 | 1975 | 1976 | 1977 |
|---|---|---|---|---|
| I ತೈಲ ರಫ್ತು ಮಾಡದ ರಾಷ್ಟ್ರಗಳು | | | | |
| 1. ಆಫ್ರಿಕನ್ ರಾಷ್ಟ್ರಗಳು (ಸಹಾರಾದ ದಕ್ಷಿಣಕ್ಕೆ) | 9,887 | 11,965 | 14,461 | 17,411 |
| 2. ಪೂರ್ವ ಏಷ್ಯ ಮತ್ತು ಪೆಸಿಫಿಕ್ ಪ್ರದೇಶದ ರಾಷ್ಟ್ರಗಳು | 8,673 | 11,268 | 14,502 | 18,588 |
| 3. ಲ್ಯಾಟಿನ್ ಅಮೇರಿಕನ್ ಮತ್ತು ಕ್ಯಾರಿಬೀಯನ್ ಪ್ರದೇಶದವು | 32,917 | 41,018 | 52,211 | 62,558 |
| 4. ಉತ್ತರ ಆಫ್ರಿಕ ಮತ್ತು ಮಧ್ಯಪ್ರಾಚ್ಯದವು | 6,310 | 9,256 | 11,649 | 16,946 |
| 5. ದಕ್ಷಿಣ ಏಷ್ಯದವು | 18,779 | 20,675 | 23,190 | 26,010 |
| 6. ಸ್ವಲ್ಪ ಅಭಿವೃದ್ಧಿ ಸಾಧಿಸಿರುವ ಮೆಡಿಟರೇನಿಯನ್ ರಾಷ್ಟ್ರಗಳು | 15,804 | 18,231 | 21,497 | 25,022 |
| II ತೈಲ ರಫ್ತು ಮಾಡುವ ಒಂಬತ್ತು ರಾಷ್ಟ್ರಗಳು | 17,792 | 20,515 | 26,058 | 34,548 |
| ಒಟ್ಟು | 7,10,150 | 1,32,928 | 1,63,567 | 2,01,083 |

ಯೊಂದು ಅಭಿವೃದ್ಧಿಶೀಲ ರಾಷ್ಟ್ರವೂ ಹೆಣಗಬೇಕಾಗುತ್ತದೆ. ಸಾಲವನ್ನು ಪಡೆಯುವ ರಾಷ್ಟ್ರ ಎಷ್ಟರ ಮಟ್ಟಿಗೆ ಅದನ್ನು ಉತ್ಪಾದಕ ಕ್ಷೇತ್ರಗಳಲ್ಲಿ ಹೂಡಿಕೆ ಮಾಡುತ್ತದೆ, ವಿದೇಶೀ ಸಾಲ ಹಣ ಎಷ್ಟರ ಮಟ್ಟಿಗೆ ನೈಜ ರಾಷ್ಟ್ರಾದಾಯವನ್ನು ಹೆಚ್ಚಿಸುತ್ತದೆ ಎಂಬ ಅಂಶಗಳು ಈ ಸಂಬಂಧದಲ್ಲಿ ಮುಖ್ಯವಾಗುತ್ತವೆ. ವಿದೇಶದಿಂದ ಪಡೆದಿರುವ ನೆರವು ಒಂದು ಪಕ್ಷ ಅನೇಕ ಆಂತರಿಕ ಕಾರಣಗಳಿಗಾಗಿ ಉತ್ಪಾದಕ ರೀತಿಯಲ್ಲಿ ಉಪಯೋಗವಾಗದೆ ಹೋದರೆ, ಸಾಲಗಾರ ರಾಷ್ಟ್ರ ಸಾಲ ಹೊಣೆಯನ್ನು ಹೊರಬೇಕಾಗುವುದರಿಂದ ಮತ್ತು ತನ್ನ ಇತರ ಮೂಲಗಳಿಂದ ಸಾಲದ ಹಣದ ಅಸಲು ಮತ್ತು ಬಡ್ಡಿಯನ್ನು ಪಾವತಿ ಮಾಡಬೇಕಾಗುವುದರಿಂದ, ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ ಬೆಳವಣಿಗೆ ವಿದೇಶಿ ಸಾಲದಿಂದ ಚುರುಕುಗೊಳ್ಳುವುದರ ಬದಲು ಕುಂಠಿತವಾಗಲೂಬಹುದು.

ವಿದೇಶಿ ಸಾಲ ಹೊಣೆಯ ಭಾರದಿಂದ ತಪ್ಪಿಸಿಕೊಳ್ಳಲು ಅಭಿವೃದ್ಧಿಶೀಲ ರಾಷ್ಟ್ರಗಳಿಗಿರುವ ಮಾರ್ಗಗಳೆಂದರೆ:

1 ವಿದೇಶಗಳಿಂದ ಸಾಲದ ಬದಲು ಸಾಧ್ಯವಾದಷ್ಟು ವಿದೇಶಿ ನೆರವು ಮತ್ತು ನೇರ ಹೂಡಿಕೆಗಳ ರೂಪದಲ್ಲಿ ಬಂಡವಾಳವನ್ನು ಪಡೆಯುವುದು,

2 ಒಂದು ರಾಷ್ಟ್ರ ಸಾಲವನ್ನು ಪಡೆಯಲೇಬೇಕಾದಾಗ, ತಾನು ಎಷ್ಟು ಹೊಣೆಯನ್ನು ಹೊರಬಹುದೋ ಅದಕ್ಕನುಗುಣವಾಗಿ ಸಾಲವನ್ನು ಪಡೆಯುವುದು,

3 ತಾನು ಪಡೆಯುವ ಸಾಲವನ್ನು ಕೇವಲ ಉಪಯುಕ್ತವಾದ ಉದ್ಯಮಗಳಲ್ಲಿ ಅತ್ಯಂತ ಉತ್ಪಾದಕ ರೀತಿಯಲ್ಲಿ ಬಳಸುವುದು,

4 ಸಾಧ್ಯವಾದಷ್ಟು ಮಟ್ಟಿಗೂ ಆಂತರಿಕವಾಗಿ ಹೆಚ್ಚಿನ ಉಳಿತಾಯ ಹೂಡಿಕೆ ನಡೆಯುವಂತೆ ನೋಡಿಕೊಳ್ಳುವುದು,

5 ದುಬಾರಿ ಬಡ್ಡಿಯ ವಿದೇಶಿ ಸಾಲಗಳನ್ನು, ಅದರಲ್ಲೂ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು, ಸಾಧ್ಯವಿದ್ದಷ್ಟೂ ತಪ್ಪಿಸಲು ಯತ್ನಿಸುವುದು,

6 ಆಮದಿನಲ್ಲಿ ಸಾಧ್ಯವಾದಷ್ಟು ಮಿತವ್ಯಯವನ್ನು ಸಾಧಿಸುವುದು, ವ್ಯವಸ್ಥಿತವಾದ ರೀತಿಯಲ್ಲಿ ಆಮದು ಪ್ರತಿನಿಧಾನ (Import substitution) ಕಾರ್ಯಕ್ರಮವನ್ನು ಯೋಜಿಸುವುದು.

ಅಭಿವೃದ್ಧಿಶೀಲ ರಾಷ್ಟ್ರಗಳು ವಿದೇಶಿ ಸಾಲದ ಹೊಣೆಯನ್ನು ಕಡಿಮೆ ಮಾಡಿಕೊಳ್ಳುವಂತೆ ಮಾಡಲು ಮುಂದುವರಿದ ರಾಷ್ಟ್ರಗಳೂ ಅನೇಕ ಕ್ರಮಗಳನ್ನು ಕೈಗೊಳ್ಳಬೇಕು. ಅವುಗಳೆಂದರೆ:

1 ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ತಮ್ಮ ರಾಷ್ಟ್ರೀಯ ವರಮಾನದ ಸೇ. 5ರಷ್ಟನ್ನು ನೆರವಿನ ರೂಪದಲ್ಲಿ ನೀಡುವುದು.

2 ಸಾಧ್ಯವಿದ್ದಷ್ಟು ಮಟ್ಟಿಗೂ, ಶೀಘ್ರವಾಗಿ ಫಲಕೊಡುವ ಉದ್ಯಮಗಳಿಗೆ ನೆರವನ್ನು ದೊರಕಿಸಿ ಕೊಡುವುದು,

3 ಬದ್ಧ ಸಾಲಕ್ಕೆ (tied loans) ಬದಲಾಗಿ ಮುಕ್ತ ಸಾಲವನ್ನು ನೀಡುವುದು,

4 ಅಭಿವೃದ್ಧಿಶೀಲ ರಾಷ್ಟ್ರಗಳಿಂದ ಹೆಚ್ಚು ಹೆಚ್ಚು ಆಮದು ಮಾಡಿಕೊಳ್ಳುವುದು.

ಮೇಲಿನ ಕ್ರಮಗಳು ದೀರ್ಘಾವಧಿಯಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳ ವಿದೇಶಿ ಸಾಲ ಹೊಣೆಯನ್ನು ಹಗುರಗೊಳಿಸಬಲ್ಲವು.

### ಭಾರತದ ಸಮಸ್ಯೆ

ವಿಶ್ವದ ಇತರ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಹೋಲಿಸಿದಂತೆ ಭಾರತದ ವಿದೇಶಿ ಬಂಡವಾಳ ಮತ್ತು ನೆರವಿನ ಬೇಡಿಕೆ ತುಂಬ ಹೆಚ್ಚಾಗಿದೆ. ಇದಕ್ಕೆ ಕಾರಣಗಳು ಹಲವಾರು. ವಿಶಾಲ ರಾಷ್ಟ್ರವಾದ ಭಾರತ ಅತ್ಯಂತ ವೇಗವಾಗಿ ಆರ್ಥಿಕ ಬೆಳವಣಿಗೆಯನ್ನು ಸಾಧಿಸುವ ಹಂಬಲ ಹೊಂದಿದೆ. ವಿದೇಶಿ ವ್ಯಾಪಾರ ಕ್ಷೇತ್ರದಲ್ಲಿ ತನಗೆ ಅಗತ್ಯವಾದ ವಿದೇಶಿ ವಿನಿಮಯವನ್ನು ದೊರಕಿಸಿಕೊಳ್ಳುವ ಸ್ಥಿತಿಯಲ್ಲಿ ಭಾರತವಿಲ್ಲ. ಹೀಗಾಗಿ ಅದು ಅನಿವಾರ್ಯವಾಗಿ ಹೆಚ್ಚು ಹೆಚ್ಚು ವಿದೇಶಿ ನೆರವನ್ನು ಬೇಡಬೇಕಾಗಿದೆ. ಉದಾಹರಣೆಗೆ 1976–77ರಲ್ಲಿ ಮಾತ್ರ ರೂ. 69 ಕೋಟಿಯ ವಿದೇಶಿ ವ್ಯಾಪಾರ ಅಧಿಶೇಷವನ್ನು ಹೊಂದಿತ್ತು. ಅದರ ಅನಂತರದ ವರ್ಷಗಳಲ್ಲಿ ಭಾರತದ ವ್ಯಾಪಾರ ಕೊರತೆ (trade deficit) ಹೆಚ್ಚುತ್ತಲೇ ನಡೆದಿದೆ. 1977–78ರಲ್ಲಿ ರೂ. 612 ಕೋಟಿ, 1978–79ರಲ್ಲಿ ರೂ. 1,088 ಕೋಟಿ, 1979–80ರಲ್ಲಿ ರೂ. 2,232 ಕೋಟಿ ವಿದೇಶಿ ವ್ಯಾಪಾರ ಕೊರತೆ ಉಂಟಾಗಿದೆ. ಈ ಕೊರತೆಯನ್ನು ಹೇಗೆ ತುಂಬಿಕೊಳ್ಳುವುದು ಎನ್ನುವುದು ಭಾರತದ ಪ್ರಮುಖ ಸಮಸ್ಯೆ.

ತೈಲದ ಆಮದಿನಿಂದಾಗಿ ಭಾರತದ ವಿದೇಶಿ ನೆರವಿನ ಅಗತ್ಯ ಹೆಚ್ಚುತ್ತಾ ಬಂದಿದೆ. ರಾಷ್ಟ್ರದ ಒಟ್ಟು ಆಮದಿಗೆ ಪಾವತಿ ಮಾಡುವ ಹಣದಲ್ಲಿ ಸೇ. 75ರಷ್ಟನ್ನು ತೈಲ ಆಮದಿಗಾಗಿಯೇ ಖರ್ಚು ಮಾಡಬೇಕಾದ ಪರಿಸ್ಥಿತಿ ಭಾರತಕ್ಕೆ ಒದಗಿಬಂದಿದೆ. ಇತ್ತೀಚಿನ ವರ್ಷಗಳಲ್ಲಿ ಭಾರತಕ್ಕೆ ವಿದೇಶಗಳಿಂದ ಪಾವತಿಗಳು (remittances) ಸುಗಮವಾಗಿ ನಡೆಯುತ್ತಿದ್ದುದರಿಂದ, ವಿದೇಶೀ ವಿನಿಮಯದ ಸಂಚಿತಿ (foreign exchange reserves) ಅನುಕೂಲಕರವಾಗಿತ್ತು. ಹೀಗಾಗಿ, ವಿದೇಶಿ ನೆರವಿನ ಅಗತ್ಯವನ್ನು ಕಡಿಮೆ ಮಾಡಿಕೊಳ್ಳಬಹುದೆಂಬ ಆಶೆಯೂ ಮೂಡಿತ್ತು. ಆದರೆ ಕಳೆದ ವರ್ಷದಿಂದ ವಿದೇಶಿ ಪಾವತಿಗಳ ಮೊತ್ತವೂ ಕಡಿಮೆಯಾಗಿದೆ. ಹೀಗಾಗಿ, ಭಾರತ ಅನಿವಾರ್ಯವಾಗಿ ವಿದೇಶಿ ನೆರವಿಗೆ ಮೊರೆಹೋಗಬೇಕಾಗಿದೆ. 1980–81ರ ವರ್ಷದಲ್ಲಿ ಭಾರತದ ವಿದೇಶಿ ವ್ಯಾಪಾರ ಕೊರತೆ ರೂ. 4,500 ಕೋಟಿಯನ್ನು ಮುಟ್ಟುವ ನಿರೀಕ್ಷೆಯಿದೆ. ವಿದೇಶಿ ವ್ಯಾಪಾರದ ಆದಾಯ ಮತ್ತು ವಿದೇಶಿ ಪಾವತಿಗಳಿಂದಲಂತೂ ಈ ಮಟ್ಟದ ಕೊರತೆಯನ್ನು ನಿವಾರಿಸುವುದು

ಸಾಧ್ಯವಿಲ್ಲ. ಆದ್ದರಿಂದ ಅಂತರರಾಷ್ಟ್ರೀಯ ಹಣ ಸಂಸ್ಥೆ ಮತ್ತು ಇತರ ಮೂಲಗಳಿಂದ, ನೆರವನ್ನು ಹೆಚ್ಚಾಗಿ ಪಡೆದು ಕೊಳ್ಳಲೇಬೇಕಾಗುತ್ತದೆ.

ವಿದೇಶಿ ನೆರವಿನಲ್ಲಿ ಅನೇಕ ಸಮಸ್ಯೆಗಳಿವೆ. ಸಾಮಾನ್ಯ ವಾಗಿ ನೆರವು ನಿರ್ದಿಷ್ಟ ಯೋಜನೆಗಳಿಗೆ ಮಾತ್ರ ಹೆಚ್ಚಾಗಿ ದೊರೆಯುತ್ತದೆ. ಅಂದರೆ, ನೆರವು ನೀಡುವ ರಾಷ್ಟ್ರ ಒಪ್ಪುವಂಥ ನಿರ್ದಿಷ್ಟ ಯೋಜನೆಗಾಗಿ ಮಾತ್ರ ನೆರವು ದೊರೆಯುತ್ತದೆ. ಅಂತರರಾಷ್ಟ್ರೀಯ ಹಣ ಸಂಸ್ಥೆ ವಿದೇಶಿ ಹಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನೀಡುವ ನೆರವನ್ನು ಬಿಟ್ಟರೆ ಉಳಿದ ಅಭಿವರ್ಧಿತ ರಾಷ್ಟ್ರಗಳು ನೀಡುವ ನೆರವಿಗೆಲ್ಲಾ ಈ ಮಾತು ಬಹುತೇಕ ಅನ್ವಯವಾಗುತ್ತದೆ. ಹೀಗಾದಾಗ, ಭಾರತದಂಥ ರಾಷ್ಟ್ರ ನೆರವು ನೀಡುವ ರಾಷ್ಟ್ರ ಒಪ್ಪುವಂಥ ಯೋಜನೆಯನ್ನು ತಯಾರಿಸಬೇಕಾಗುತ್ತದೆ. ಅಷ್ಟೇ ಅಲ್ಲದೆ ಅನೇಕ ಅಗ್ಗದ ಬಂಡವಾಳ ಸರಕುಗಳನ್ನು ವಿದೇಶಗಳಿಂದ ಪಡೆಯಲು ಸಿದ್ಧವಾಗಿರಬೇಕಾಗುತ್ತದೆ. ಅನೇಕ ಸಂದರ್ಭ ಗಳಲ್ಲಿ, ಸಾಕಷ್ಟು ಸಂಪನ್ಮೂಲ ವೆಚ್ಚವಾಗಿರುವ ಯೋಜನೆಗೆ ನೆರವು ದೊರಕಿರುವುದೂ ಉಂಟು. ಇದರಿಂದ ಯಾವ ಅನುಕೂಲ? ನಮ್ಮ ಯೋಜನೆಯಲ್ಲಿಯ ಪ್ರಾಶಸ್ತ್ಯಾನು ಗುಣವಾದ ಕಾರ್ಯಗಳಿಗೆ ನೆರವು ದೊರೆಯುವುದು ಸಾಧ್ಯ ವಾಗುವುದಿಲ್ಲ. ಇಷ್ಟೇ ಅಲ್ಲದೆ, ನೆರವು ನೀಡಲು ವಾಗ್ದಾನ ಮಾಡಿರುವ ರಾಷ್ಟ್ರಗಳೂ ಸಂಸ್ಥೆಗಳೂ ತಾವು ವಾಗ್ದಾನ ಮಾಡಿದ ಪೂರ್ಣ ಮೊತ್ತದ ನೆರವನ್ನು ದೊರಕಿಸಿಕೊಡುವು ದಿಲ್ಲ. ಋಣಿ ರಾಷ್ಟ್ರ ಹಿಂದಿನ ಸಾಲದ ಅಸಲು, ಮತ್ತು ಬಡ್ಡಿಗಾಗಿ ಕೊಡಬೇಕಾದ ಹಣವನ್ನು ಕಳೆದರೆ, ದೊರೆಯುವ ವಾಸ್ತವ ಹಣ ಬಹಳ ಕಡಿಮೆಯಾಗುತ್ತದೆ. ಈ ಅಂಶ ಕೋಷ್ಟಕ 2ರಿಂದ ಸ್ಥಿರವಾಗುತ್ತದೆ.

ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದಲೂ, ಅಭಿ ವೃದ್ಧಿ ಹೊಂದಿರುವ ಮಿತ್ರ ರಾಷ್ಟ್ರಗಳಿಂದಲೂ ಭಾರತ ಪಡೆಯುವ ವಿದೇಶಿ ನೆರವು ಅದರ ಅಂತರರಾಷ್ಟ್ರೀಯ ವಾಣಿಜ್ಯ ಕೊರತೆಯನ್ನು ತುಂಬಿಸಲು ಸಾಕಾಗುವುದಿಲ್ಲ. ಹೀಗಾಗಿ ಅದು ಅನಿವಾರ್ಯವಾಗಿ ವಿದೇಶಿ ಹಣಕಾಸು ನೀಡಿಕೆಯ ಮೂಲಗಳಿಂದ ಅದಕ್ಕಿಂತ ದುಬಾರಿ ಬಡ್ಡಿಗೆ ನೆರವನ್ನು ಪಡೆದುಕೊಳ್ಳಬೇಕಾಗುತ್ತದೆ. ಇದನ್ನು ಬಿಟ್ಟು ಬೇರೆ ದಾರಿಯೇ ಇರುವುದಿಲ್ಲ. ಅದರಲ್ಲೂ ಅತ್ಯಂತ ಬೃಹತ್‌ಗಾತ್ರದ 6ನೆಯ ಯೋಜನೆಯ ಜಾರಿಯಲ್ಲಿ ವಿದೇಶಿ ನೆರವು ಹೆಚ್ಚು ಹೆಚ್ಚಾಗಿ ಅಗತ್ಯವಾಗಿಯೇ ತೀರುತ್ತದೆ.

## ಕೆಲವು ಪರಿಹಾರಗಳು

ಅಂತರರಾಷ್ಟ್ರೀಯ ಮಟ್ಟದಲ್ಲಿ ಅಭಿವರ್ಧಿತ ರಾಷ್ಟ್ರಗಳು ಬಡರಾಷ್ಟ್ರಗಳ ವಿದೇಶೀ ಸಾಲ ಹೊಣೆಯನ್ನು ಕಡಿಮೆ ಮಾಡಲು ಜವಾಬ್ದಾರಿಯಿಂದ ವರ್ತಿಸಿದರೆ, ಈ ಸಮಸ್ಯೆ ಹಗುರಗೊಳ್ಳುವುದು ಸಾಧ್ಯ. ಆದರೆ, ನಾವು ಇದುವರೆಗೆ ನೋಡಿದಂತೆ, ಅಭಿವರ್ಧಿತ ರಾಷ್ಟ್ರಗಳು ಈ ಸಮಸ್ಯೆಯನ್ನು ರಾಜಕೀಯವಾಗಿ ನೋಡುತ್ತ ಬಂದಿವೆಯೇ ಹೊರತು ಅವು ಆರ್ಥಿಕ ದೃಷ್ಟಿಯಿಂದ ಕಾರ್ಯಪ್ರವೃತ್ತವಾಗಿರುವುದು ಬಹಳ ಕಡಿಮೆ. ಹೀಗಿರುವಾಗ, ಪ್ರತಿಯೊಂದು ಅಭಿವೃದ್ಧಿ ಶೀಲ ದೇಶವೂ ವಿದೇಶಿ ನೆರವಿನ ಸಮಸ್ಯೆಗೆ ತನ್ನದೇ ಆದ ಪರಿಹಾರವನ್ನು ಹುಡುಕಿಕೊಳ್ಳಬೇಕಾಗುತ್ತದೆ. ಭಾರತಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಕೆಳಗಿನ ಕ್ರಮಗಳಿಂದ ವಿದೇಶಿ ಸಾಲ ಹೊಣೆಯನ್ನು ಹಗುರಗೊಳಿಸುವುದು ಸಾಧ್ಯ.

1 ಪೆಟ್ರೋಲಿಯಮ್‌ಗೆ ಬದಲಾಗಿ ಇತರ ಶಕ್ತಿಮೂಲಗ ಗಳನ್ನು ಭಾರತ ಹೆಚ್ಚಾಗಿ ಬಳಸಿಕೊಳ್ಳಬೇಕು. ಕಲ್ಲಿದ್ದಲು, ವಿದ್ಯುತ್ ಈ ದಿಶೆಯಲ್ಲಿ ಸಹಾಯಕವಾಗಬಲ್ಲುವು. ಇದರಿಂದ ಅತಿಯಾದ ವಿದೇಶಿ ವಿನಿಮಯ ಬೇಡಿಕೆಯ ಒತ್ತಡ ವನ್ನು ಕಡಿಮೆ ಮಾಡಿಕೊಳ್ಳುವುದು ಸಾಧ್ಯ.

2 ಭಾರತ ತನ್ನ ವಿದೇಶಿ ರಫ್ತನ್ನು ಕ್ರಮಬದ್ಧವಾಗಿ ಹೆಚ್ಚಿಸಿಕೊಳ್ಳಬೇಕು. ಇದಕ್ಕೆ ಅಗತ್ಯವಾದ ಕೈಗಾರಿಕಾ ಉತ್ಪನ್ನದ ಹೆಚ್ಚಳಕ್ಕೆ ಅಗತ್ಯವಾದ ಯೋಜನೆಯನ್ನು ರೂಪಿಸಬೇಕು.

3 ಆಮದು ಪ್ರತಿನಿಧಾನ ಅತ್ಯಂತ ವೇಗದ ಗತಿಯಲ್ಲಿ ಮುಂದುವರಿಯಬೇಕು. ಹಿಂದೆ ಈ ಕಾರ್ಯಕ್ರಮಕ್ಕಿದ್ದ ಚುರುಕು ಈಗಿಲ್ಲ. ಇದು ವಿಷಾದಕರ.

ಈ ಮೂರೂ ಕಾರ್ಯಕ್ರಮಗಳೂ ಏಕಕಾಲದಲ್ಲಿ ವೇಗ ವಾಗಿ ಕಾರ್ಯಗತವಾದರೆ ಮುಂದಿನ ವರ್ಷಗಳಲ್ಲಿ ರಾಷ್ಟ್ರದ ವಿದೇಶಿ ಸಾಲದ ಹೊಣೆ ಹಗುರವಾಗುತ್ತದೆ.

ಕೋಷ್ಟಕ 2—**ಭಾರತಕ್ಕೆ ವಿದೇಶಿ ನೆರವು** (ಕೋಟಿ ರೂ.ಗಳಲ್ಲಿ)

| ವರ್ಷ | ವಾಗ್ದಾನವಾದ ಮೊಬಲಗು | ಒಟ್ಟು ಬಂದಿರುವ ಮೊಬಲಗು | ಹಿಂದಿನ ಸಾಲ ಪಾವತಿ | | | ನಿವ್ವಳ ನೆರವು |
|---|---|---|---|---|---|---|
| | | | ಹಿಂದಿನ ಋಣಭಾರ | ಬಡ್ಡಿ | ಒಟ್ಟು | |
| 1975–76 | 2,654 | 1,841 | 463 | 224 | 687 | 1,154 |
| 1976–77 | 1,286 | 1,599 | 508 | 247 | 755 | 844 |
| 1977–78 | 1,897 | 1,290 | 561 | 260 | 831 | 469 |
| 1978–79 | 2,334 | 1,266 | 594 | 288 | 882 | 384 |
| 1979–80 | 2,606 | 1,382 | 563 | 295 | 858 | 524 |

# ಬ್ಯಾಂಕಿನಲ್ಲಿ ಗ್ರಾಹಕರ ದೂರುಗಳೇಕೆ?

ಎಚ್. ಜಿ. ಸೋಮಶೇಖರರಾವ್

## ಬ್ಯಾಂಕುಗಳ ಮುಖ್ಯ ಮೂಲಧನವೆಂದರೆ ಜನರೇ—ಎಂಬ ಮಾತಿಗೆ ಆಧಾರವಾದ ಅನುಭವದ ಆಣಿಮುತ್ತುಗಳು

'ಗ್ರಾಹಕ ಯಾವಾಗಲೂ ಸರಿ'—'A customer is always right'—ಎಂಬ ಮಾತು ತುಂಬ ಅರ್ಥ ಗರ್ಭಿತ. ಈ ತತ್ತ್ವದ ಮೇಲೆ ಬ್ಯಾಂಕಿನಲ್ಲಿ ನಮ್ಮ ಮಾನವೀಯ ಸಂಬಂಧಗಳು ಹೊಸ ಅರ್ಥವ್ಯಾಪ್ತಿಯನ್ನು ಪಡೆಯುತ್ತವೆ. ಗ್ರಾಹಕರ ನಿಲುವು ಯಾವಾಗಲೂ ಸರಿ ಎನ್ನುವ ಮಾತು ಬ್ಯಾಂಕು ಮತ್ತು ಗ್ರಾಹಕರ ವ್ಯಾಪಕ ಸಂಬಂಧಗಳನ್ನೆಲ್ಲ ಒಳಗೊಂಡಿದೆ. ಹಾಗಾದರೆ ಗ್ರಾಹಕ ಏನು ಹೇಳಿದರೂ ಒಪ್ಪಿಕೊಳ್ಳಬೇಕೆ?—ಎಂಬ ಪ್ರಶ್ನೆ ಉದ್ಭವಿಸುತ್ತದೆ. ಬ್ಯಾಂಕ್ ಮತ್ತು ಗ್ರಾಹಕರ ಸಂಬಂಧಗಳ ಸ್ಪಷ್ಟ ಕಲ್ಪನೆಯನ್ನು ತಿಳಿಯಲು ಈ ಮಾತು ಸಹಾಯಕ ವಾಗುತ್ತದೆ; ಮೇಲ್ನೋಟದ ಅರ್ಥದಲ್ಲಿ ಮಾತ್ರವೇ ಇದನ್ನು ನೋಡಬಾರದು.

ಒಂದು ವರ್ಗಕ್ಕೆ ಮೀಸಲಾಗಿದ್ದ ಬ್ಯಾಂಕುಗಳ ಕಾರ್ಯ ವ್ಯಾಪ್ತಿ ಈಗ ಎಲ್ಲರನ್ನೂ ಎಲ್ಲವನ್ನೂ ಮುಟ್ಟುವಂತಾಗಿದೆ. ಅದರಲ್ಲೂ ರಾಷ್ಟ್ರೀಕರಣವಾದ ಮೇಲೆ ಬ್ಯಾಂಕುಗಳು ಎಲ್ಲರ ಗಮನವನ್ನು ಸೆಳೆಯುತ್ತಿದ್ದು, ದಿನನಿತ್ಯ ಅವುಗಳ ಕಾರ್ಯಚಟುವಟಿಕೆಗಳು ಎಲ್ಲರಿಗೂ ಚರ್ಚೆಯ ವಿಷಯ ವಾಗಿವೆ. ಬ್ಯಾಂಕುಗಳ ಉದ್ದೇಶಗಳೇನು? ಕರ್ತವ್ಯಗಳೇನು? —ಎಂದು ಎತ್ತರದ ಧ್ವನಿಯಲ್ಲಿ ಜನಸಾಮಾನ್ಯರೂ ಕೇಳು ತ್ತಿದ್ದಾರೆ.

ರಾಷ್ಟ್ರೀಕರಣದಿಂದ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹೊಸ ಅಧ್ಯಾಯ ಪ್ರಾರಂಭವಾಗಿದೆ. ಅನೇಕ ಹೊಸ ಯೋಜನೆಗಳು ಬರುತ್ತಿವೆ. ಬ್ಯಾಂಕ್ ನೌಕರರಿಗೆ ಇವು ಒಂದು ಹೊಸ ಸವಾಲಾಗಿ ಪರಿಣಮಿಸಿವೆ. ಪಟ್ಟಣಗಳಿಗೇ ಸೀಮಿತವಾಗಿದ್ದ ಬ್ಯಾಂಕ್ ಶಾಖೆಗಳು ಇದುವರೆಗೂ ಲಾಭವನ್ನೇ ಮುಖ್ಯ ಉದ್ದಿಶ್ಯವಾಗಿ ಇಟ್ಟುಕೊಂಡಿದ್ದು ಜನಸಾಮಾನ್ಯರ ಸಂಪರ್ಕ ದಿಂದ ದೂರವಾಗಿದ್ದುವು. ರಾಷ್ಟ್ರೀಕರಣದ ಅನಂತರ ಬ್ಯಾಂಕಿನ ಸಿಬ್ಬಂದಿಯ ಸೇವೆ ಮತ್ತು ಕರ್ತವ್ಯಪರತೆಯನ್ನು ಮುಖ್ಯವಾಗಿಟ್ಟುಕೊಳ್ಳಬೇಕಾಗಿದೆ. ಬ್ಯಾಂಕು ಕೆಲಸ ಮಾಡುವ ಆವರಣದ ಸುತ್ತಲ ಜನಗಳಿಗೆ ಈ ನೌಕರರು ಮಿತ್ರರು, ಸಲಹೆಗಾರರು ಮತ್ತು ಮಾರ್ಗದರ್ಶಿಗಳಾಗ ಬೇಕಾಗಿದೆ. ಬ್ಯಾಂಕು ಕೇವಲ ವ್ಯಾಪಾರಿ ಸಂಸ್ಥೆಯಾಗಿ ಉಳಿಯದೆ ಅಭಿವೃದ್ಧಿಕಾರ್ಯಗಳತ್ತ ಮುಖ ಮಾಡಿದೆ. ಕೆಲಸ ಗಾರರು ತಮ್ಮ ಮನಃಪ್ರವೃತ್ತಿಗಳನ್ನು ಈ ಬದಲಾವಣೆಗೆ ಹೊಂದಿಸಿಕೊಳ್ಳಬೇಕು. ವ್ಯಕ್ತಿ ಸ್ವರೂಪವಿಲ್ಲದ ಮನೋ ಭಾವದಿಂದ ದೂರ ಹೋಗಿ ಬ್ಯಾಂಕ್ ನೌಕರರು ತಾವು ದೇಶಸೇವಕರೆಂಬುದನ್ನು ಅರಿತು ಗ್ರಾಹಕರೊಡನೆ ನಿಕಟ ಹಾಗೂ ಸೌಹಾರ್ದ ಸಂಪರ್ಕದ ಸೇತುವೆಯನ್ನು ಕಟ್ಟಬೇಕು. ಈಗ ಪ್ರಾರಂಭವಾಗಿರುವ ಹೊಸ ಶಕೆಯ ಹೊಸ ಸವಾಲು ಗಳನ್ನು ತಮ್ಮ ಕೌಶಲದಿಂದ ಎದುರಿಸಬೇಕು.

ಬ್ಯಾಂಕಿನ ವ್ಯವಹಾರದಲ್ಲಿ ಮೂರು ನಿಯಮಗಳನ್ನು ಅಗತ್ಯವಾಗಿ ಪಾಲಿಸಬೇಕು: (1) ಪೂರ್ಣ ನಂಬಿಕೆ, (2) ಗೋಪ್ಯತೆ, (3) ಸುಲಭ ಕಾರ್ಯ ನಿರ್ವಹಣೆ. ಲೇವಾದೇವಿಗೆ ಸಂಬಂಧಿಸಿದ ಸೂಕ್ಷ್ಮವಾದ ವ್ಯವಹಾರವನ್ನು ಬ್ಯಾಂಕು ಒಳಗೊಂಡಿದೆ. ಅದಕ್ಕಾಗಿ ಲಾಭದ ಮೇಲಿನ ಕಣ್ಣನ್ನು ತೆಗೆದು ಸೇವಾ ಮನೋಭಾವವನ್ನು ಬೆಳೆಸಿ ಕೊಳ್ಳುತ್ತ ಕ್ರಾಂತಿಕಾರಕ, ಶಕ್ತಿಯುತ ಹಾಗೂ ಸ್ಪಷ್ಟವಾದ ಹೊಸ ಪ್ರಜ್ಞೆಯನ್ನು ತಂದುಕೊಳ್ಳಬೇಕಾಗಿದೆ. ರಾಷ್ಟ್ರೀ ಕರಣ ನಮ್ಮ ಎಲ್ಲಾ ಸಮಸ್ಯೆಗಳಿಗೂ ಉತ್ತರವಲ್ಲ; ಅದು ಒಂದು ಅದ್ಭುತ ಅವಕಾಶ, ಅಷ್ಟೆ. ಸೇವೆಯ ಬುನಾದಿಯ ಮೇಲೆ ಕರ್ತವ್ಯನಿಷ್ಠರಾದ ನೌಕರರಿಂದ ರಾಷ್ಟ್ರೀಕರಣದ ಉದ್ದೇಶಗಳು ಸಫಲವಾಗುತ್ತವೆ. ಈಗ ಬ್ಯಾಂಕಿನ ಸೇವೆ ಗಳು ಸಮರ್ಪಕವಾಗಿಲ್ಲ ಮತ್ತು ವೇಗಗತಿಯಲ್ಲಿ ಅವು ಕ್ಷೀಣಿಸುತ್ತಿವೆ ಎಂಬ ದೂರು ಎಲ್ಲ ಕಡೆ ಕೇಳಿಬರುತ್ತದೆ.

ಬಹುಶಃ ಇದಕ್ಕೆ ಕಾರಣ ನೌಕರರಿಗೆ ಕೆಲಸದಲ್ಲಿ ಇರುವ ಭದ್ರತೆ. ಕೆಲಸ ಮಾಡಲಿ ಬಿಡಲಿ ಸಿಬ್ಬಂದಿ ಸಂಘಗಳೊಡನೆ ಮಾಡಿಕೊಳ್ಳುವ ಒಪ್ಪಂದದ ಮೇರೆಗೆ ಮೇಲುದರ್ಜೆಗೆ ಸುಲಭವಾಗಿ ಅವರಿಗೆ ಬಡ್ತಿ ಸಿಗುತ್ತದೆ. ಶೀಘ್ರ ಹಾಗೂ ವಿನಯಪೂರಿತ ಸೇವೆಯ ಅಭಾವವೇ ಈ ದೂರುಗಳಿಗೆ ಕಾರಣ.

ಪಟ್ಟಣಗಳಲ್ಲಾಗಲಿ, ಹಳ್ಳಿಗಳಲ್ಲಾಗಲಿ ಬ್ಯಾಂಕುಗಳ ಮುಖ್ಯ ಮೂಲಧನ ಜನರೇ. ನಮ್ಮೆಲ್ಲ ವ್ಯವಹಾರಗಳೂ ನಡೆಯುವುದು ಆ ಜನರೊಡನೆ ಮತ್ತು ಅವರ ಹಣಕಾಸಿನೊಂದಿಗೆ.

**ಕೆಲವು ಘಟನೆಗಳು**

ನಿಜವಾಗಿ ನಡೆದ ಕೆಲವು ಘಟನೆಗಳನ್ನು ಇಲ್ಲಿ ಉಲ್ಲೇಖಿಸಿದೆ. ವಿಷಯ ಎಷ್ಟೇ ಸಣ್ಣದಾದರೂ ಬ್ಯಾಂಕಿನಲ್ಲಿ ಗ್ರಾಹಕರ ಮನಸ್ಸಿಗೆ ಹೇಗೆ ಕಿರಿಕಿರಿ ಆಗುತ್ತದೆ ಎಂದು ತಿಳಿಯಲು ಇದು ಸಹಾಯಕವಾಗುತ್ತದೆ. ಬ್ಯಾಂಕಿಗೆ ಬರುವ ಗ್ರಾಹಕರು ಠೇವಣಿ ಇಡುವುದಕ್ಕೇ ಬರಲಿ. ಸಾಲ ಕೇಳುವುದಕ್ಕೇ ಬರಲಿ, ತಮಗೆ ಸರಿಯಾದ ಗಮನವನ್ನು ಕೊಡಬೇಕೆಂದು ಅಪೇಕ್ಷಿಸುತ್ತಾರೆ. ಅದು ಸಹಜ. ಮುಖ ನೋಡಿ ಮಣೆ ಹಾಕುವ ಮನೋಭಾವ ಬ್ಯಾಂಕಿನಲ್ಲಿ ಸಲ್ಲ.

1 ಒಂದು ಶಾಖೆಗೆ ಇಳಿವಯಸ್ಸಿನ, ಬೆನ್ನುಬಾಗಿದ, ಮುಖ ಸುಕ್ಕುಗಟ್ಟಿದ್ದ, ಸಾಮಾನ್ಯ ಉಡುಪು ಧರಿಸಿದ್ದ ಮುದುಕರೊಬ್ಬರು ಬಂದರು. ಭ್ಯಾಂಕಿನಲ್ಲಿ ಯಾರೂ ಅವರನ್ನು ಗಮನಿಸಲಿಲ್ಲ. ಮುದುಕರಿಗೆ ಏನೂ ತೋಚದೆ, ನೇರವಾಗಿ ಆ ಶಾಖೆಯ ಅಧಿಕಾರಿಯೊಬ್ಬರ ಬಳಿ ಹೋದರು. ಆ ಅಧಿಕಾರಿ ಅವರನ್ನು ಪ್ರೀತಿಯಿಂದ ಬರಮಾಡಿಕೊಂಡು, ಬಂದ ಕಾರಣವನ್ನು ಕೇಳಿದರು. ಆ ಮುದುಕರು ತುರ್ತಾಗಿ ನಗರ ಸಭೆಗೆ ತೆರಿಗೆ ಕಟ್ಟಬೇಕಾಗಿತ್ತು. ಆ ವ್ಯವಸ್ಥೆ ಬ್ಯಾಂಕಿನಲ್ಲಿ ಇರಲಿಲ್ಲ. ಆದರೂ ಆ ಅಧಿಕಾರಿ ಅವರ ಕಾಗದ ಪತ್ರಗಳನ್ನು ನೋಡಿದರು. ಆಗ ಗೊತ್ತಾಯಿತು, ಬಂದಿರುವ ಮುದುಕರು ಆ ಶಾಖೆಯ ಎದುರಿಗಿದ್ದ ಇಡೀ ಸಾಲುಸಾಲು ಮನೆಗಳ ಮಾಲೀಕರೆಂದು! ತೆರಿಗೆ ಕಟ್ಟಲು ವ್ಯವಸ್ಥೆ ಮಾಡಲಾಯಿತು. ಮುದುಕರಿಗೆ ಸಂತೋಷವಾಯಿತು. ಮನೆಯಲ್ಲಿ ಬಚ್ಚಿಟ್ಟಿದ್ದ ಹಣ ಹೊರಗೆ ಬಂತು. ಕೊಳೆಯಾಗಿದ್ದ ಮುದ್ದೆಮುದ್ದೆ ನೋಟುಗಳನ್ನು ಕಂತೆಯಾಗಿ ತಂದರು. ಮುಂದೆ ಏಳು ತಿಂಗಳಲ್ಲಿ ಅವರ ಖಾತೆಗೆ 3 ಲಕ್ಷ ರೂಪಾಯಿಗಳ ಜಮಾ ಆಯಿತು. ದೇಶದ ಅನೇಕ ಅಭಿವೃದ್ಧಿ ಕಾರ್ಯಗಳಿಗೆ ಈ ಹಣ ಉಪಯೋಗವಾಯಿತು. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ದೊಡ್ಡವರಿರಲಿ ಚಿಕ್ಕವರಿರಲಿ ಬ್ಯಾಂಕಿಗೆ ಬರುವ ಪ್ರತಿಯೊಬ್ಬ ಗ್ರಾಹಕನೂ 'ಬಹು ಮುಖ್ಯ ವ್ಯಕ್ತಿ'.

2 ಇದೊಂದು ಸಣ್ಣ ವಿಷಯ: ಕೌಂಟರಿನಲ್ಲಿ ಹೆಚ್ಚು ಸಂಖ್ಯೆಯಲ್ಲಿ ಗ್ರಾಹಕರು ಸೇರಿದ್ದರು. ಕೆಲಸದ ಭರಾಟೆಯಲ್ಲಿ ನೌಕರರು ಅತ್ತಿತ್ತ ನೋಡುವುದೂ ಕಷ್ಟವಾಗಿತ್ತು. ಹಾಗಿದ್ದಾಗ ಒಬ್ಬ ಗ್ರಾಹಕ ಒಂದು ಚೆಕ್ಕನ್ನು ತನ್ನ ಪಾಸ್ ಬುಕ್ಕಿನೊಂದಿಗೆ ನೌಕರರೊಬ್ಬನಿಗೆ ಕೊಟ್ಟರು. ಆ ಚೆಕ್ಕಿನ ಹಣ ಗ್ರಾಹಕರಿಗೆ ಮುಟ್ಟಿತು. ಗ್ರಾಹಕರು ತಮ್ಮ ಪಾಸ್ ಬುಕ್ಕನ್ನು ವಾಪಸ್ಸು ಕೇಳಿದರು. ನೌಕರ "ಈಗ ಬರೆಯುವುದಕ್ಕೆ ಸಾಧ್ಯವಿಲ್ಲ. ಇನ್ನೊಂದು ದಿನ ಬನ್ನಿ" ಅಂದ. ಗ್ರಾಹಕರು "ಬರೆಯಬೇಕಾದ್ದು ಒಂದೇ ಖರ್ಚಿನ ಬಾಬ್ತು. ಅದಕ್ಕೋಸ್ಕರ ನಾನು ಮತ್ತೊಮ್ಮೆ ಬರಬೇಕೆ?" ಎಂದು ಕೇಳಿದರು. ನೌಕರ ಮುಖ ಸಿಂಡರಿಸಿದ. ಬುಕ್ಕಿನಲ್ಲಿ ಏನೋ ಅವಸರದಿಂದ ಗೀಚಿದ. ಕೌಂಟರಿನ ಹಿಂದಿನಿಂದ ಆ ಪಾಸು ಬುಕ್ಕನ್ನು ಮೇಲಕ್ಕೆ ಎಸೆದ. ಕೌಂಟರಿನ ನುಣುಪಾಗಿದ್ದ ಮೇಲ್ಭಾಗದಿಂದ ಆ ಪುಸ್ತಕ ಜಾರಿ ಕೆಳಕ್ಕೆ ಬಿದ್ದಿತು. ಗ್ರಾಹಕ ಗಲಿಬಿಲಿಯಾದ. ಸಿಟ್ಟು ಬಂದು "ನಾನು ಇಟ್ಟ ಹಣ ನನಗೆ ಕೊಡೋಕೆ ನಿಮ್ಮ ಮುಂದೆ ಕೈ ಮುಗಿದು ನಿಲ್ಲಬೇಕೆ? ಸಾಕು, ನನ್ನ ಖಾತೆಯನ್ನು ಮುಚ್ಚಿಬಿಡಿ" ಎಂದ. ಇಲ್ಲಿ 'ನಗುತ್ತ ವ್ಯವಹರಿಸಿ'—'Smile and sell'—ಎನ್ನುವ ನೀತಿಯನ್ನು ಮರೆತದ್ದರಿಂದ ಗ್ರಾಹಕರಿಗೆ ಬೇಸರವಾಯಿತು, 'ನಗುನಗುತ್ತ ಸೇವೆ', 'Service with a smile' ಎನ್ನುವುದು ಕೇವಲ ಪ್ರಚಾರವಾಗಿ ಉಳಿಯಿತು.

3 ಒಬ್ಬ ವ್ಯಕ್ತಿ ಖಾತೆಯನ್ನು ತೆಗೆಯಲು ಬ್ಯಾಂಕಿಗೆ ಬಂದರು. ಯಾವ ಖಾತೆ ಹೆಚ್ಚು ಉಪಯೋಗ ಎಂದು ತಿಳಿಯಲು ಬಯಸಿದರು. ಬ್ಯಾಂಕ್ ಸಿಬ್ಬಂದಿ ಅವರಿಗೆ ಅನುಕೂಲವಾಗುವಂಥ ಖಾತೆ ತೆಗೆಯಲು ಸಹಾಯ ಮಾಡಬೇಕಿತ್ತು. ಬದಲಾಗಿ ಅಚ್ಚಾಗಿದ್ದ ಒಂದು ಕರಪತ್ರವನ್ನು ಕೌಂಟರಿನ ಮೇಲೆ ಎಸೆದುಬಿಟ್ಟ. ಪಾಪ, ಗ್ರಾಹಕ ಖಾತೆ ತೆಗೆಯುವ ಇಚ್ಛೆಯಿಂದ ಆ ಪತ್ರದ ಹಾಳೆಗಳನ್ನು ತಿರುವಿದರು. ಅದರ ತುಂಬ ಅರ್ಥವಾಗದ ತಾಂತ್ರಿಕ ವಿವರಗಳು! ಗ್ರಾಹಕ ಗೊಂದಲದಲ್ಲಿ ಬಿದ್ದು ತಲೆ ಕೆಡಿಸಿಕೊಂಡರು. ಏನೂ ತೋಚದೆ ಅತ್ತಿತ್ತ ನೋಡದೆ ನೆಟ್ಟಗೆ ಬ್ಯಾಂಕಿನಿಂದ ಹೊರಕ್ಕೆ ಹೋಗಿಬಿಟ್ಟರು. ಆಮೇಲೆ ಗೊತ್ತಾಯಿತು—ಆತ ಒಬ್ಬ ದೊಡ್ಡ ಎಣ್ಣೆ ವ್ಯಾಪಾರಿಯೆಂದು, ಮತ್ತು ಇನ್ನೊಂದು ಬ್ಯಾಂಕಿನಲ್ಲಿ ದೊಡ್ಡ ಮೊತ್ತದ ಠೇವಣಿ ಕೊಟ್ಟರೆಂದು. ಈ ಗ್ರಾಹಕರನ್ನು ಕಳೆದುಕೊಂಡದ್ದು ಒಂದು ಕಡೆಗಿರಲಿ; ಆತ ತನಗಾದ ಕೆಟ್ಟ ಅನುಭವವನ್ನು ತನಗೆ

ಗೊತ್ತಿದ್ದ ಜನರಿಗೆಲ್ಲ ಹೇಳಿದ. ಅದರಿಂದ ಆ ಬ್ಯಾಂಕಿನ ಹಿತಕ್ಕೆ ತೀವ್ರ ಧಕ್ಕೆಯಾಯಿತು. ಎಷ್ಟು ಲಕ್ಷ ರೂಪಾಯಿ ಖರ್ಚು ಮಾಡಿ ಎಲ್ಲ ಕಡೆ ಜಾಹಿರಾತುಗಳನ್ನು ಹಾಕಿದರೆ ತಾನೇ ಏನು ಪ್ರಯೋಜನ ?

4 ಒಬ್ಬ ದೊಡ್ಡ ಠೇವಣಿದಾರರು ತಮ್ಮ ಉಳಿತಾಯ ಖಾತೆಯ ಮೇಲೆ ಬೇರೆ ಯಾರಿಗೋ ಒಂದು ಚೆಕ್ಕು ಕೊಟ್ಟಿದ್ದರು. ಆ ಠೇವಣಿದಾರರು ಊರಿನ ಪ್ರಮುಖರು, ಸಮಾಜದಲ್ಲಿ ಪ್ರತಿಷ್ಠಿತರು. ಅವರು ಕೊಟ್ಟಿದ್ದ ಚೆಕ್ಕನ್ನು ಹಿಡಿದು ಬಂದ ವ್ಯಕ್ತಿ ಕೌಂಟರಿನ ಸರದಿಯಲ್ಲಿ ನಿಂತರು. ತಮ್ಮ ಸರದಿ ಬಂದಾಗ ಚೆಕ್ ಕೊಟ್ಟರು. ಆ ದಿನವೇ ಆ ಖಾತೆಯಲ್ಲಿ ದೊಡ್ಡ ಮೊತ್ತದ ಹಣ ಜಮ ಆಗಬೇಕಿತ್ತು. ನಿಗದಿ ಕಾಲದ ಠೇವಣಿಯಾಗಿ ಇಟ್ಟಿದ್ದ 3 ಲಕ್ಷ ರೂಪಾಯಿಗಳ ಮೇಲಿನ ಬಡ್ಡಿ. ಅದರ ದಾಖಲೆ ಅಂದು ಆಗದೆ ಉಳಿದಿತ್ತು. ನೌಕರ ಇದನ್ನು ಗಮನಿಸದೆ, ಖಾತೆದಾರನ ಮರ್ಯಾದೆಯನ್ನು ತಿಳಿಯದೆ ಯಾಂತ್ರಿಕವಾಗಿ ಆ ಚೆಕ್ಕನ್ನು ವ್ಯಕ್ತಿಯ ಮುಂದೆ ಎಸೆದು, "ಅಕೌಂಟಿನಲ್ಲಿ ದುಡ್ಡಿಲ್ಲಾರೀ . . ಯಾವೋನ್ರಿ ಅವ್ನು ಚೆಕ್ಕು ಕೊಟ್ಟೋನು?" ಎಂದು ಎತ್ತರದ ಧ್ವನಿಯಲ್ಲಿ ಕೇಳಿದ. ಮುಂದೆ ಏನಾಗಿರಬಹುದು ಎಂಬುದನ್ನು ಊಹಿಸಿಕೊಳ್ಳಬಹುದಲ್ಲವೆ?

5 ಬ್ಯಾಂಕಿನ ವ್ಯವಹಾರ ಎಷ್ಟು ಸೂಕ್ಷ್ಮ! ಬ್ಯಾಂಕಿನಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರೂ ತಾವು ಆಡುವ ಮಾತನ್ನು ತೂಕ ಹಾಕಿ ಆಡಬೇಕು. ಒಂದು ಸಾರಿ ಗ್ರಾಹಕರೊಬ್ಬರು ಬ್ಯಾಂಕಿಗೆ ಫೋನ್ ಮಾಡಿದರು. ಅಂದು ಬ್ಯಾಂಕಿನಲ್ಲಿ ಎಂದೂ ಇಲ್ಲದಷ್ಟು ಗಡಿಬಿಡಿ, ಗದ್ದಲ, ನೂಕುನುಗ್ಗಲು. ಗ್ರಾಹಕರು ಫೋನ್‌ನಲ್ಲಿ ತಮ್ಮ ಖಾತೆಯ ಬಗ್ಗೆ ಏನನ್ನೋ ಕೇಳಲು ಬಯಸಿದ್ದರು. ಫೋನ್ ತೆಗೆದುಕೊಂಡ ಬ್ಯಾಂಕ್ ಸಿಬ್ಬಂದಿ, "ಈಗ ವಿಪರೀತ ಗಲಾಟೆ. ನೀವೇ ಬ್ಯಾಂಕಿಗೆ ಬಂದು ವಿಚಾರಿಸಿಕೊಂಡು ಹೋಗಿ" ಅಂದ. ತನ್ನ ಮೇಲಿದ್ದ ಕೆಲಸದ ಹೊರೆಯಿಂದ ತಲೆ ಕೆಡಿಸಿಕೊಂಡಿದ್ದ ನೌಕರ ಆ ಗ್ರಾಹಕರು ಆಗಲೇ ತಮಗೆ ತಿಳಿಸಬೇಕೆಂದು ಮತ್ತೊಮ್ಮೆ ಹೇಳಿದಾಗ—"Hang on! I will see" ಎಂದು ಹೇಳಿ, 10 ನಿಮಿಷಗಳ ಮೇಲೆ ಗಡುಸಾಗಿ, "ನಿಮ್ಮ ದುಡ್ಡು ಇನ್ನೂ ಪೋಸ್ಟ್ ಆಗಿಲ್ಲ. ಆದ ಮೇಲೆ ನಿಮ್ಮ ಅಕೌಂಟಿನಲ್ಲಿ ಡೆಬಿಟ್ ಮಾಡ್ತೀವಿ" ಎಂದು ಹೇಳಿ ಫೋನನ್ನು ದಭಕ್ಕನೆ ಇಟ್ಟು ಬಿಟ್ಟ. ಇಲ್ಲಿ ನಮ್ಮ ಕಾಲದ ಜೊತೆಗೆ ಗ್ರಾಹಕರ ಕಾಲವನ್ನೂ ವ್ಯರ್ಥ ಮಾಡಿದಂತಾಯಿತು. ಅಷ್ಟೇ ಅಲ್ಲ, ಗ್ರಾಹಕರಿಗೆ ಅರ್ಥವಾಗದ ಬ್ಯಾಂಕಿಂಗ್ ಭಾಷೆಯಲ್ಲಿ ಉತ್ತರವನ್ನು ಹೇಳಿ ಮುಗಿಸಿದ್ದು ಗ್ರಾಹಕರ ಮನಸ್ಸಿನ ಮೇಲೆ ಏನು ಪರಿಣಾಮ ಮಾಡಿರಬೇಕು? ಆ ಗ್ರಾಹಕರು ಮತ್ತೆ ಆ ಬ್ಯಾಂಕಿಗೆ ಬರಲೇ ಇಲ್ಲ.

ಪ್ರತಿಯೊಬ್ಬ ನೌಕರನೂ ತಾನು ಕೆಲಸ ಮಾಡುತ್ತಿರುವ ಸಂಸ್ಥೆಯನ್ನು ತನ್ನ ಕೆಲಸಗಳ ಮೂಲಕ ಪ್ರತಿನಿಧಿಸುತ್ತಾನೆ ಎಂಬುದು ಮುಖ್ಯ. ಬ್ಯಾಂಕ್ ನೌಕರರು ಹೆಚ್ಚು ವಿದ್ಯಾವಂತರೆಂಬುದು ಈ ಮಾತಿಗೆ ಇನ್ನಷ್ಟು ಅರ್ಥವನ್ನು ಕೊಡುತ್ತದೆ.

ಆಲ್ಫ್ರೆಡ್ ಟ್ಯಾಕ್ ಎಂಬವನು ಒಂದು ಸೊಗಸಾದ ತತ್ತ್ವವನ್ನು ನಮ್ಮ ಮುಂದಿಟ್ಟಿದ್ದಾನೆ. ಅದು ಏನೆಂದರೆ— "YOU—WE—I" ಅನ್ನುವುದು. ಇದನ್ನು "ನೀವು—ನಾವು—ನಾನು" ಎಂದು ಹೇಳಬಹುದು. ಇಲ್ಲಿ "ನೀವು" ಅಂದರೆ ನಮ್ಮ ಎಲ್ಲಾ ಕೆಲಸ ಕಾರ್ಯಗಳ ಮೂಲಧನವಾದ ಜನ—ಗ್ರಾಹಕರು; "ನಾವು" ಎಂದರೆ ಬ್ಯಾಂಕಿಂಗ್ ಸಂಸ್ಥೆ; ಮತ್ತು "ನಾನು" ಎಂದರೆ ಕೆಲಸಗಾರ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು ಗ್ರಾಹಕರನ್ನು ಮತ್ತು ಗ್ರಾಹಕರು ಪೋಷಿಸುವ ಸಂಸ್ಥೆಯನ್ನು ಎತ್ತರದ ಸ್ಥಾನದಲ್ಲಿಟ್ಟಿರುವುದು. ಆದ್ದರಿಂದ ಗ್ರಾಹಕರೇ ನಮ್ಮೆಲ್ಲ ಚಟುವಟಿಕೆಗಳ ಮೂಲ. ಅವರಿಗಾಗಿಯೇ ಸಂಸ್ಥೆ ಮತ್ತು ಅಲ್ಲಿಯ ನೌಕರರು; "ಎನಗಿಂತ ಕಿರಿಯರಿಲ್ಲ, ಗ್ರಾಹಕರಿಗಿಂತ ಹಿರಿಯರಿಲ್ಲ" ಎಂಬುದು ಪ್ರತಿ ಬ್ಯಾಂಕ್ ನೌಕರನ ದಿನನಿತ್ಯದ ಮಂತ್ರವಾಗಬೇಕು.

ನಗರ ಮತ್ತು ಮಹಾನಗರಗಳಲ್ಲಿಯ ಅನುಸೂಚಿತ ವಾಣಿಜ್ಯ ಬ್ಯಾಂಕುಗಳಲ್ಲಿಯ ಚಾಲ್ತಿ ಖಾತೆದಾರರು ಖಾತೆಯನ್ನು ತೆರೆಯುವಾಗ ಮೊದಲ ಠೇವಣಿ (Initial Deposit) ರೂ. ೫೦೦/-ನ್ನು ಜಮೆ ಮಾಡಬೇಕೆಂದೂ ಕನಿಷ್ಠ ಸಿಲ್ಕು (Minimum Balance) ೫೦೦/-ನ್ನು ಯಾವಾಗಲೂ ಖಾತೆಯಲ್ಲಿರಿಸಬೇಕೆಂದೂ; ಅಂತೆಯೇ ಅರೆ-ನಗರ ಮತ್ತು ಗ್ರಾಮಾಂತರಗಳಲ್ಲಿಯ ಚಾಲ್ತಿ ಖಾತೆದಾರರೂ ರೂ. ೨೦೦/-ನ್ನು ಮೊದಲ ಠೇವಣಿ ಹಾಗೂ ಕನಿಷ್ಠ ಸಿಲ್ಕನ್ನು ಇರಿಸಬೇಕೆಂದೂ ಭಾರತೀಯ ಬ್ಯಾಂಕುಗಳ ಸಂಘ ನಿಗದಿಪಡಿಸಿದೆ.

ಬ್ಯಾಂಕಿಂಗಿನ ಇತಿಹಾಸ—೨

# ಅಕ್ಕಸಾಲಿಗರ ಸಾಹಸ

ಎಚ್ಚೆಸ್ಕೆ

ಆಧುನಿಕ ಬ್ಯಾಂಕುಗಳ ಮೂಲಪುರುಷರು ಮಧ್ಯಯುಗದ ಅಂತರರಾಷ್ಟ್ರೀಯ ಖ್ಯಾತಿಯ ವರ್ತಕ ಪ್ರಭುಗಳು, ಲೇವಾ ದೇವಿಗಾರರು ಮತ್ತು ಇಂಗ್ಲೆಂಡಿನ ಅಕ್ಕಸಾಲಿಗರು ಎಂಬು ದಾಗಿ ಹೇಳುವುದು ವಾಡಿಕೆ. ಆ ಕಾಲದ ಯೂರೋಪಿನ ವರ್ತಕರಂತೆ ಆಧುನಿಕ ಬ್ಯಾಂಕುಗಳ ಖ್ಯಾತಿ ಪ್ರಪಂಚ ವ್ಯಾಪಿಯಾದದ್ದು. ಹಳೆಯ ಕಾಲದ ಲೇವಾದೇವಿಗಾರರಂತೆ ಆಧುನಿಕ ಬ್ಯಾಂಕುಗಳೂ ಹಣ ಸಾಲ ನೀಡುವುದರಲ್ಲಿ ಪ್ರಾವೀಣ್ಯ ಗಳಿಸಿಕೊಂಡಿವೆ. ಆದರೆ ಇಷ್ಟಕ್ಕೇ ಇವುಗಳ ಕಲಾಪ ಸೀಮಿತವಾದ್ದಲ್ಲ. ಕಂಡವರ ಹಣವನ್ನು ಠೇವಣಿ ಯಾಗಿ ಇಟ್ಟುಕೊಳ್ಳುವುದು, ಆ ಮೂಲಕ ತಾವೇ ಋಣಿ ಗಳಾಗುವುದು, ಆ ಠೇವಣಿಯ ಬಲದ ಮೇಲೆ ಸಾಲ ನೀಡುವುದು, ಚೆಕ್ಕುಗಳೆಂಬ ವಿಶಿಷ್ಟ ರೀತಿಯ ಹಣ ಪ್ರಕಾರದ ಸೃಷ್ಟಿಕರ್ತರಾಗುವುದು, ಠೇವಣಿಯನ್ನೇ ಸೃಷ್ಟಿಸು ವುದು—ಹೀಗೆ ನಾನಾ ಬಗೆಯ ಕಲಾಪಗಳಲ್ಲಿ ಇಂದಿನ ಬ್ಯಾಂಕುಗಳು ನಿರತವಾಗಿವೆ. ಅವು ಬ್ಯಾಂಕುಗಳೆನಿಸಿಕೊಳ್ಳು ವುದು—ಕೇವಲ ಲೇವಾದೇವಿಗಾರರ ಸಂಸ್ಥೆಗಳಲ್ಲವೆಂದು ಆಗಿರುವುದು—ಅವುಗಳ ಈ ಕಲಾಪಗಳಿಂದಾಗಿ. ಬ್ಯಾಂಕು ಗಳ ಈ ಬಗೆಯ ವಹಿವಾಟುಗಳು ವಿಕಾಸಗೊಂಡದ್ದು ಬಹುತೇಕ ಇಂಗ್ಲೆಂಡಿನ ಅಕ್ಕಸಾಲಿಗರಿಂದ. ಅಕ್ಕಸಾಲಿಗರನ್ನೂ ಆಧುನಿಕ ಬ್ಯಾಂಕುಗಳ ಪೂರ್ವಜರೆಂದು ಕರೆಯುವುದು ಈ ಕಾರಣದಿಂದಲೇ. ಆಧುನಿಕ ಬ್ಯಾಂಕುಗಳ ನಿಜವಾದ ಪೂರ್ವಜರೆಂದರೆ ಇಂಗ್ಲೆಂಡಿನ ಅಕ್ಕಸಾಲಿಗರೇ ಎಂದು ಸಾಧಿಸುವವರೂ ಇದ್ದಾರೆ.

## ದೊರೆಯ ಕೃತ್ಯ

ಬ್ಯಾಂಕುಗಳ ಈ ಬಗೆಯ ಕಲಾಪಗಳ ವಿಕಾಸಕ್ಕೆ ಪರೋಕ್ಷ ವಾಗಿ ಕಾರಣನಾದವನೆಂದರೆ ಇಂಗ್ಲೆಂಡಿನ ದೊರೆ ಒಂದನೆಯ ಚಾರ್ಲ್ಸ್. ದೊರೆ ಚಾರ್ಲ್ಸನನ್ನು ಇಂಗ್ಲೆಂಡಿನ ಪಾರ್ಲಿ ಮೆಂಟು ದೇಶದ್ರೋಹಿಯೆಂದು ಪರಿಗಣಿಸಿ 1649ರಲ್ಲಿ ಅವನ ತಲೆ ಕಡಿಸಿಹಾಕಿತು. ಆದರೆ 1640ರಲ್ಲಿ ಚಾರ್ಲ್ಸ್ ಮಾಡಿದ ಒಂದು ಕೃತ್ಯದಿಂದಾಗಿ ಠೇವಣಿ ಬ್ಯಾಂಕಿಂಗ್ ವ್ಯವಸ್ಥೆ ಸ್ಪಷ್ಟವಾಗಿ ಖಚಿತವಾಗಿ ರೂಪುಗೊಳ್ಳುವುದು ಸಾಧ್ಯವಾಯಿತೆನ್ನಬೇಕು. ಇದಕ್ಕಾಗಿಯೂ ಬಹುಶಃ ಚಾರ್ಲ್ಸನನ್ನು ನಾವು ನೆನೆಯಬೇಕು.

ಪಾರ್ಲಿಮೆಂಟಿನೊಡನೆ ಬಡಿದಾಟ ಹಾಗೂ ಅಂತರ್ ಯುದ್ಧದಿಂದಾಗಿ ಚಾರ್ಲ್ಸ್ ಹಣದ ಪೇಚಿಗೆ ಸಿಕ್ಕಿಕೊಂಡಿದ್ದ. ಲಂಡನ್ನಿನ ವ್ಯಾಪಾರಿಗಳು ಸರಕಾರದ ಟಂಕಸಾಲೆಯಲ್ಲಿ ಇಟ್ಟಿದ್ದ ಚಿನ್ನದ ಮೇಲೆ ಅವನ ಕಣ್ಣು ಬಿತ್ತು. ಚಾರ್ಲ್ಸ್ ಅದನ್ನು ಮುಟ್ಟುಗೋಲು ಹಾಕಿಕೊಂಡ. ವರ್ತಕರು ಬೊಬ್ಬೆಯಿಟ್ಟರು. ತನಗೆ ಸಾಲ ನೀಡುವುದಾದರೆ ಮಾತ್ರ ಆ ಚಿನ್ನವನ್ನು ಬಿಡುಗಡೆ ಮಾಡುವುದಾಗಿ ಅವನು ಷರತ್ತು ಹಾಕಿದ. ದೊರೆಯ ಈ ಕೃತ್ಯದಿಂದಾಗಿ ಟಂಕಸಾಲೆಯಲ್ಲಿ ತಮ್ಮ ಧನಕನಕವನ್ನು ಇಡುವುದು ಎಷ್ಟು ಅಭದ್ರವೆಂಬುದು ವರ್ತಕರಿಗೆ ಮನವರಿಕೆಯಾಯಿತು. ಅದನ್ನು ಭದ್ರವಾಗಿ ಇಡುವ ಬೇರೆ ತಾಣ ಯಾವುದೆಂದು ಅವರು ಯೋಚಿಸ ತೊಡಗಿದರು. ಅವರ ಕಣ್ಣಿಗೆ ಅಕ್ಕಸಾಲಿಗರು ಬಿದ್ದರು. ತಮ್ಮ ಗ್ರಾಹಕರು ಒಡವೆ ಮಾಡಲು ಕೊಟ್ಟ ಚಿನ್ನವನ್ನು ಸುರಕ್ಷಿತವಾಗಿ ಇಡುವುದಕ್ಕಾಗಿ ಭದ್ರ ತಿಜೋರಿಗಳನ್ನಿಟ್ಟು ಕೊಂಡಿರುವುದು ಅಕ್ಕಸಾಲಿಗರ ವಾಡಿಕೆ. ಹಣವಿದ್ದ ವರ್ತಕರೂ ಶ್ರೀಮಂತ ಭೂ ಒಡೆಯರೂ ಅಕ್ಕಸಾಲಿಗರ ಬಳಿಗೆ ಹೋದರು. ಅಕ್ಕಸಾಲಿಗರು ಅವರ ಹಣವನ್ನು ಭದ್ರ ಸುಪರ್ದಿಗಾಗಿ ತೆಗೆದುಕೊಂಡರು. ಇದು ಮೊದ ಮೊದಲ ಠೇವಣಿ; ಅದರ ಭ್ರೂಣಾವಸ್ಥೆ.

## ಬ್ಯಾಂಕು ವ್ಯವಹಾರದ ವಿಕಾಸ

ಯೂರೋಪಿನ ಹಣ ವರ್ಗಾವಣೆ ಬ್ಯಾಂಕುಗಳು ತಮ್ಮಲ್ಲಿ ಗ್ರಾಹಕರು ಇಟ್ಟ ಠೇವಣಿಗಳನ್ನು ಮುಟ್ಟದೆ ಹಾಗೇ ಇಡಬೇಕೆಂಬ ತತ್ತ್ವವನ್ನು ಅನುಸರಿಸುತ್ತಿದ್ದುವು. ಆದರೆ

ಇಂಗ್ಲೆಂಡಿನ ಅಕ್ಕಸಾಲಿಗರು ಇಂಥ ನಿಷ್ಠುರ ವ್ರತಕ್ಕೇನೂ ಬಹುಕಾಲ ಕಟ್ಟುಬೀಳಲಿಲ್ಲ. ಠೇವಣಿಗಳನ್ನು ಸಾಲ ನೀಡುವುದಕ್ಕಾಗಿ ಬಳಸಿಕೊಳ್ಳುವುದಾಗಿ ಅವರು ತಮ್ಮ ಠೇವಣಿದಾರರಿಗೆ ಸ್ಪಷ್ಟವಾಗಿ ತಿಳಿಸಿದರು. ಹಣವನ್ನು ಭದ್ರ ಸುಪರ್ದಿಗಾಗಿ ಇಟ್ಟುಕೊಳ್ಳಲು ಶುಲ್ಕ ವಿಧಿಸುವ ಬದಲು, ತಾವೇ ಠೇವಣಿಗಳ ಮೇಲೆ ಬಡ್ಡಿ ಕೊಡಲಾರಂಭಿಸಿದರು. ದೀರ್ಘಕಾಲ ಇಡಲಾದ ಠೇವಣಿಗಳು ತಮಗೆ ಲಾಭಕರ ವೆಂಬುದು ಅವರಿಗೆ ಮನವರಿಕೆಯಾಯಿತು. ಬೇಡಿದಾಗ ವಾಪಸ್ ಪಾವತಿ ಮಾಡಬೇಕೆಂಬ ಷರತ್ತಿನ ಠೇವಣಿಗಳ ಮೇಲೆ ಬಡ್ಡಿ ಕೊಡುವುದನ್ನು ಅನಂತರ ಅವರು ನಿಲ್ಲಿಸಿದರು. ದೀರ್ಘ ಅವಧಿಗಳ ಠೇವಣಿಗಳ ಮೇಲೆ ಅವುಗಳ ದೀರ್ಘತೆಗಳಿಗೆ ಅನುಗುಣವಾದ ದರಗಳಲ್ಲಿ ಬಡ್ಡಿ ಕೊಡಲಾರಂಭಿಸಿದರು. ಠೇವಣಿಗಳನ್ನು ಸ್ವೀಕರಿಸಿದ್ದಕ್ಕೆ ರುಜುವಾತಾಗಿ ಅವರು ನೀಡುತ್ತಿದ್ದ ರಸೀತಿಗಳು ಹಣವಾಗಿ ಚಲಾವಣೆಯಾಗತೊಡಗಿದುವು. ಠೇವಣಿದಾರರು ಇತರರಿಗೆ ಹಣ ಪಾವತಿ ಮಾಡಬೇಕಾದಾಗ ಈ ರಸೀತಿಗಳನ್ನೇ ಅವರ ಹೆಸರುಗಳಿಗೆ ವರ್ಗಾಯಿಸಿ ಕೊಡುತ್ತಿದ್ದುದುಂಟು. ಇವೇ ಇಂಗ್ಲೆಂಡಿನ ಅತ್ಯಂತ ಪ್ರಾಚೀನ ರೂಪದ ನೋಟು ಗಳೆನ್ನಬಹುದು. ಇವು ಕೇಳಿದಾಗ ಪಾವತಿ ಮಾಡುವುದಾಗಿ ಅಕ್ಕಸಾಲಿಗರು ಮಾಡಿದ ವಾಗ್ದಾನಗಳಾಗಿದ್ದುವು. ಅಕ್ಕ ಸಾಲಿಗರ ಪ್ರತ್ಯಯದಲ್ಲಿ ಜನಕ್ಕೆ ನಂಬಿಕೆಯಿದ್ದುದರಿಂದ, ಇವನ್ನು ವರ್ಗವಾಗಿ ಪಡೆದವರು ಅನೇಕ ವೇಳೆ ಅಕ್ಕಸಾಲಿಗರ ಬಳಿಗೆ ಕೂಡಲೇ ಓಡಿಹೋಗಿ ಇವಕ್ಕೆ ಪ್ರತಿಯಾಗಿ ಹಣವನ್ನು ಪಡೆದುಕೊಳ್ಳುತ್ತಿರಲಿಲ್ಲ. ಆದ್ದರಿಂದ ಅಕ್ಕಸಾಲಿಗರಲ್ಲಿ ಠೇವಣಿಯಾಗಿ ಇಡಲಾಗಿದ್ದ ಹಣದ ಒಂದು ಭಾಗವನ್ನಷ್ಟೇ ಅವರು ಪಾವತಿಗಾಗಿ ಇಟ್ಟುಕೊಂಡಿದ್ದರೆ ಸಾಕಾಗಿತ್ತು. ಎಷ್ಟನ್ನು ಇಟ್ಟುಕೊಂಡಿದ್ದರೆ ಸಾಕೆಂಬುದು ಅನುಭವದಿಂದ ಅವರಿಗೆ ಗೊತ್ತಾಯಿತು. ಆದ್ದರಿಂದ ಅವರು ಅನೇಕರಿಗೆ ಸಾಲ ಕೊಡುವುದಕ್ಕೂ ತೊಡಗಿದರು. ಅವರು ಕೊಡು ತ್ತಿದ್ದುದು ಹಣವನ್ನೇ ಅಲ್ಲ, ಠೇವಣಿ ರಸೀತಿಗಳು. ಈ ರಸೀತಿಗಳನ್ನೇ ಹಣವೆಂದು ಗ್ರಾಹಕರು ಪರಿಗಣಿಸುತ್ತಿದ್ದರು. ಲಂಡನ್ನಿನ ವರ್ತಕರು ತಮಗೆ ಪಾವತಿಯಾಗಬೇಕಾದ ಹುಂಡಿಗಳನ್ನು ಈ ಅಕ್ಕಸಾಲಿಗರಿಗೆ ಕೊಟ್ಟು, ಅವನ್ನು ಮುರಿಸಿ ಹಣ ಪಡೆಯುತ್ತಿದ್ದರು, ಎಂದರೆ ಸಾಲ ಪಡೆಯು ತ್ತಿದ್ದರು. ಹುಂಡಿಯ ಮುಖ ಮೌಲ್ಯದಲ್ಲಿ ಸ್ವಲ್ಪ ಅಂಶ ವನ್ನು ಅಕ್ಕಸಾಲಿಗರು ಹಿಡಿದುಕೊಂಡು ಉಳಿದ ಮೊಬಲಗ ನ್ನೇ ಈ ವರ್ತಕರಿಗೆ ಪಾವತಿ ಮಾಡುತ್ತಿದ್ದದ್ದು. ಹೀಗೆ ಹಿಡಿದುಕೊಳ್ಳುತ್ತಿದ್ದದ್ದು ಅಕ್ಕಸಾಲಿಗರ ಶುಲ್ಕ; ಇದು ವಟ್ಟ.

ಸಾಲದ ಮೂಲಕವೋ, ತಮಗೆ ಹಣ ಪಾವತಿ ಮಾಡಿದ್ದ ರಿಂದಲೋ ಅಕ್ಕಸಾಲಿಗರು ಒದಗಿಸುತ್ತಿದ್ದ ಠೇವಣಿಗಳನ್ನು ಗ್ರಾಹಕರು ಹಲವು ಬಗೆಯಾಗಿ ಬಳಸಿಕೊಳ್ಳಬಹುದಾಗಿತ್ತು. ಅಕ್ಕಸಾಲಿಗರಲ್ಲಿ ಈ ರೀತಿ ಠೇವಣಿ ಇಟ್ಟಿದ್ದವರು ತಮ್ಮ ತಮ್ಮಲ್ಲೇ ಇದನ್ನು ವರ್ಗಾಯಿಸಿಕೊಳ್ಳಬಹುದಾಗಿತ್ತು. ಹೀಗೆ ಪರಸ್ಪರ ಋಣಗಳನ್ನು ಇತ್ಯರ್ಥಪಡಿಸಿಕೊಳ್ಳುವುದು ಸಾಧ್ಯವಿತ್ತು. ಅಕ್ಕಸಾಲಿಗರು ಮಾಡುತ್ತಿದ್ದದ್ದು ಇಷ್ಟೆ: ಲೆಕ್ಕಪುಸ್ತಕದಲ್ಲಿ ಒಬ್ಬ ಗ್ರಾಹಕನ ಖಾತೆಯಿಂದ ಒಂದು ನಿಶ್ಚಿತ ಮೊಬಲಗನ್ನು ಕಳೆದು ಇನ್ನೊಬ್ಬನ ಖಾತೆಗೆ ಕೂಡಿಸು ವುದು. ಠೇವಣಿಯ ಮೊಬಲಗನ್ನು ಕೇಳಿದಾಗ ಪಾವತಿ ಮಾಡಬೇಕೆಂಬ ಷರತ್ತಿಗೆ ಅಕ್ಕಸಾಲಿಗರು ಬದ್ಧರಾಗಿದ್ದುದ ರಿಂದ, ಬೇರೆ ಯಾವೊಬ್ಬನಿಗಾಗಲಿ ಇಂತಿಷ್ಟು ಮೊಬಲಗು ಪಾವತಿ ಮಾಡತಕ್ಕದ್ದೆಂದು ತನ್ನ ಅಕ್ಕಸಾಲಿಗನಿಗೆ ಆದೇಶ ನೀಡಬಹುದಿತ್ತು. ಇಂಥ ಆದೇಶಗಳೇ ಮೊದಮೊದಲ ಚೆಕ್ಕುಗಳು.

## ದ್ರವತ್ವಕ್ಕೆ ಧಕ್ಕೆ

ಲಂಡನ್ನಿನ ಅಕ್ಕಸಾಲಿಗರು ಈ ರೀತಿ ಹಣ-ವಹಿವಾಟು ಗಳಲ್ಲಿ ತೊಡಗಿ, ಬಲಿಷ್ಠರಾಗತೊಡಗಿದಾಗ ಇಂಗ್ಲೆಂಡಿನ ಸರಕಾರದ ಖಜಾನೆಯ ಕಣ್ಣು ಅವರ ಮೇಲೆ ಬಿತ್ತು. ಅವರಿಗೂ ಖಜಾನೆಗೂ ನಡುವೆ ವ್ಯವಹಾರ ಬೆಳೆಯಿತು. ಆದರೆ ರಾಜದೃಷ್ಟಿ ಯಾವಾಗಲೂ ಒಳ್ಳೆಯದೇ ಆಗಿರುವು ದಿಲ್ಲ. 1672ರಲ್ಲಿ ಸರಕಾರ ಒಮ್ಮೆಲೇ ಅಕ್ಕಸಾಲಿಗರಿಗೆ ಹಣ ಪಾವತಿಯನ್ನು ನಿಲ್ಲಿಸಿತು. ಹಣಕಾಸಿನ ತೊಂದರೆಯೇ ಕಾರಣ. ಅಕ್ಕಸಾಲಿಗರ ದ್ರವತ್ವಕ್ಕೆ ಧಕ್ಕೆ ಉಂಟಾಯಿತು. ಕೇಳಿದಾಗ ಕೊಡುವುದಾಗಿ ಠೇವಣಿದಾರರಿಗೆ ನೀಡಿದ ವಾಗ್ದಾನ ವನ್ನು ಅವರು ಪಾಲಿಸಲಾಗಲಿಲ್ಲ. ಗ್ರಾಹಕರಿಗೆ ಅವರಲ್ಲಿ ನಂಬಿಕೆ ಕರಗಿತು. ಗ್ರಾಹಕರು ಒಮ್ಮೆಲೇ ಹಣಕ್ಕೆ ತಗಾದೆ ಮಾಡಿದರು. ಅನೇಕ ಅಕ್ಕಸಾಲಿಗರು ಕಕ್ಕಾಬಿಕ್ಕಿಯಾದರು. ಬಹುತೇಕ ಅಕ್ಕಸಾಲಿಗರು ದಿವಾಳಿಯಾದರು. ಸರಕಾರದ ಪ್ರತ್ಯಯ ನಷ್ಟವಾಯಿತು. ಅಕ್ಕಸಾಲಿಗರ ಬ್ಯಾಂಕಿಂಗ್ ವ್ಯವಹಾರವನ್ನು ಮೊಳಕೆಯಲ್ಲೇ ಚಿವುಟಿ ಹಾಕಿದಂತಾಯಿತು.

ಇದರಿಂದ ಇಂಗ್ಲೆಂಡಿನ ವರ್ತಕರಿಗೆ ಬಹಳ ತೊಂದರೆ ಯಾಯಿತು. ಸರಕಾರದ ಅಧೀನದಲ್ಲಿಲ್ಲದ ಸುಭದ್ರ ಹಣಕಾಸು ಸಂಸ್ಥೆಯೊಂದು ಅವರ ವ್ಯವಹಾರಗಳಿಗೆ ಅವಶ್ಯ ವಾಗಿತ್ತು. ಅಕ್ಕಸಾಲಿಗರು ಈ ಕಾರ್ಯಭಾರವನ್ನು ತಕ್ಕ ಮಟ್ಟಿಗೆ ನಿರ್ವಹಿಸುತ್ತಿದ್ದರು. ಅವರ ಸ್ಥಾನದಲ್ಲಿ ಸಾರ್ವ ಜನಿಕ ಸಂಸ್ಥೆಯೊಂದನ್ನು ಸ್ಥಾಪಿಸಲು ಅಂದಿನ ರಾಜಕೀಯ ಪರಿಸ್ಥಿತಿ ಪ್ರತಿಕೂಲಕರವಾದ್ದಾಗಿತ್ತು. ಇಂಗ್ಲೆಂಡಿನ ದೊರೆಗೂ ಅಲ್ಲಿಯ ಪಾರ್ಲಿಮೆಂಟಿಗೂ ನಡುವೆ ಪರಮಾಧಿಕಾರಕ್ಕಾಗಿ ಬಡಿದಾಟ ನಡೆದಿತ್ತು. ಸರಕಾರ ಯಾವುದೇ ಸಾಲವನ್ನೆತ್ತ

ಬೇಕಾದರೂ ಅದಕ್ಕೆ ತನ್ನ ಸಮ್ಮತಿ ಅಗತ್ಯ ಎಂಬುದು ಪಾರ್ಲಿಮೆಂಟಿನ ನಿಲುವು. ನಾಗರಿಕ ಹಕ್ಕುಗಳನ್ನು ಮೊಟಕು ಮಾಡುವ ಯಾವುದೇ ಕ್ರಮಕ್ಕೆ ಅದು ಒಪ್ಪಲಿಲ್ಲ. ಸರಕಾರಕ್ಕೆ ಸಾಲ ಕೊಡಲು ಶಕ್ತವಾದ ಬ್ಯಾಂಕೊಂದರ ಸ್ಥಾಪನೆಯಾದರೆ ಆಗ ಸರಕಾರ ಹಣಕ್ಕಾಗಿ ಪಾರ್ಲಿಮೆಂಟಿನ ಕೈ ಕಾಯಬೇಕಾಗಿರದ ಸ್ಥಿತಿ ಬಂದೀತೆಂದು ಪಾರ್ಲಿಮೆಂಟ್ ಶಂಕಿಸಿತು. ಹಣದ ಮೇಲೆ ಹಿಡಿತ ಹೊಂದುವುದರ ಮೂಲಕ ದೊರೆಯನ್ನು ಸಾಂಕುಶನನ್ನಾಗಿ ಮಾಡಬೇಕೆಂಬುದು ಪಾರ್ಲಿಮೆಂಟಿನ ಸಂಕಲ್ಪ. ಪರಮಾಧಿಕಾರ ನಿಹಿತವಾಗಿರಬೇಕಾದ್ದು ತನ್ನಲ್ಲೇ ಹೊರತು ದೊರೆತನದಲ್ಲಲ್ಲವೆಂಬುದನ್ನು ಸಾಧಿಸುತ್ತಿದ್ದ ಪಾರ್ಲಿಮೆಂಟು ತನ್ನ ಈ ನಿಲುವನ್ನು ದುರ್ಬಲಗೊಳಿಸುವ ಯಾವುದೇ ಯೋಜನೆಗೆ ಬೆಂಬಲ ನೀಡಲು ಒಪ್ಪುತ್ತಿರಲಿಲ್ಲ. 1688ರಲ್ಲಿ ಇಂಗ್ಲೆಂಡಿನಲ್ಲಿ ಆದ ಕ್ರಾಂತಿಯ ಫಲವಾಗಿ ಎರಡನೆಯ ಜೇಮ್ಸ್ ದೊರೆ ಪದಚ್ಯುತನಾದ. ಅವನ ಅಳಿಯ ಮೂರನೆಯ ವಿಲಿಯಂ ಇಂಗ್ಲೆಂಡಿನ ದೊರೆಯಾದ. ರಾಜಕೀಯ ವಾತಾವರಣ ತಿಳಿಗೊಂಡಿತು.

### ಪೇಟರ್‌ಸನ್ ಯೋಜನೆ

ಬ್ಯಾಂಕೊಂದರ ಸ್ಥಾಪನೆಗೆ ಅನೇಕರು ಯೋಜನೆಗಳನ್ನು ಮಂಡಿಸಿದ್ದರು. ಅವುಗಳ ಪೈಕಿ ವಿಲಿಯಂ ಪೇಟರ್‌ಸನ್ ಎಂಬವನದು ಕಾರ್ಯರೂಪಕ್ಕೆ ಬಂತು. ಸರಕಾರಕ್ಕೆ ಸಾಲ ನೀಡುವುದರ ಮೂಲಕ ಬ್ಯಾಂಕನ್ನು ಸ್ಥಾಪಿಸುವ ಯೋಜನೆ ಅದು. ಸರಕಾರ ಹೊಸದಾಗಿ ವಿಧಿಸಲು ಒಪ್ಪಿಗೆ ಪಡೆದಿದ್ದ ತೆರಿಗೆಗಳ ಆಧಾರದ ಮೇಲೆ ಹನ್ನೆರಡು ಲಕ್ಷ ಪೌಂಡುಗಳ ಸಾಲವೆತ್ತಲು ಅದಕ್ಕೆ ಅಧಿಕಾರ ನೀಡಲಾಗಿತ್ತು. ವರ್ಷಕ್ಕೆ ಒಂದು ಲಕ್ಷ ಪೌಂಡುಗಳಂತೆ ಇದನ್ನು ಮರುಪಾವತಿ ಮಾಡಬೇಕೆಂಬುದು ಒಂದು ಷರತ್ತು. 1694ರ ಏಪ್ರಿಲ್ 25ರಂದು ನೀಡಲಾದ ಸನ್ನದಿನ ಪ್ರಕಾರ ಸರಕಾರದ ಈ ಸಾಲಿಗರ ಸಂಸ್ಥೆಯು ಸ್ಥಾಪನೆಯಾಯಿತು. 'ಬ್ಯಾಂಕ್ ಆಫ್ ಇಂಗ್ಲೆಂಡಿನ ಗವರ್ನರ್ ಮತ್ತು ಕಂಪೆನಿ' ಎಂದು ಇದರ ಹೆಸರು. ಬ್ಯಾಂಕಿಂಗ್ ಕಲಾಪಗಳಲ್ಲಿ ನಿರತವಾಗಲು ಇದಕ್ಕೆ ಹಕ್ಕು ದೊರಕಿತು. ಚಿನ್ನ ಬೆಳ್ಳಿ ಗಟ್ಟಿಗಳ ಖರೀದಿ, ಹುಂಡಿಗಳ ವಟಾವಣೆ, ಆಧಾರಿತ ಸಾಲಗಳ ನೀಡಿಕೆ—ಇವು ಇದರ ಮುಖ್ಯ ಬ್ಯಾಂಕಿಂಗ್ ಕಲಾಪಗಳು. ಸರಕಾರಕ್ಕೆ ನೀಡಿದ ಸಾಲವೇ ಇದರ ಬಂಡವಾಳ. ಕಾರ್ಯನಿರ್ವಹಣೆಗೆ ಅಗತ್ಯವಾದ ಬಂಡವಾಳಕ್ಕಾಗಿ ಬ್ಯಾಂಕು ಠೇವಣಿಗಳನ್ನು ಸ್ವೀಕರಿಸಬಹುದಾಗಿತ್ತು. ತನ್ನ ಬಂಡವಾಳದ ಭಾಗವಾಗಿದ್ದ ಪರಕ್ರಾಮ್ಯ ಪ್ರತಿಭೂತಿಗಳ (negotiable securities) ಆಧಾರದ ಮೇಲೆ ಇದು ನೋಟುಗಳನ್ನು ನೀಡಬಹುದಾಗಿತ್ತು. ಮುಂದೆ ಸರಕಾರಕ್ಕೆ ಬ್ಯಾಂಕು ಹೆಚ್ಚು ಹೆಚ್ಚು ಸಾಲ ನೀಡಿದಂತೆಲ್ಲ ಇದರ ಬಂಡವಾಳವೂ ಏರುತ್ತ ಹೋಯಿತು, ಇದರ ನೋಟು ನೀಡಿಕೆಯ ಪರಿಮಿತಿಯೂ ವಿಸ್ತರಿಸುತ್ತ ಸಾಗಿತ್ತು. ಆದರೆ ಪರಕ್ರಾಮ್ಯ ಪ್ರತಿಭೂತಿಗಳ ಮೇಲೆ ಮಾತ್ರವೇ ನೋಟು ನೀಡಬಹುದಾಗಿತ್ತು. ಬ್ಯಾಂಕ್ ಆಫ್ ಇಂಗ್ಲೆಂಡ್ ಹೀಗೆ ಪ್ರಪ್ರಥಮ ಆಧುನಿಕ ನೋಟು ನೀಡಿಕೆ ಬ್ಯಾಂಕು ಆಯಿತು. ಜೊತೆಗೆ ಇದು ಗ್ರಾಹಕರ ಖಾತೆಗಳಲ್ಲಿ ಒಂದರಿಂದ ಇನ್ನೊಂದಕ್ಕೆ ಹಣವನ್ನು ವರ್ಗಾಯಿಸುವ ಕೆಲಸವನ್ನೂ, ವಾಣಿಜ್ಯ ಬ್ಯಾಂಕಿಂಗ್ ವ್ಯವಹಾರವನ್ನೂ ಮಾಡುತ್ತಿತ್ತು. ಬಹುಕಾಲ ಇದು ಇಂಗ್ಲೆಂಡಿನ ಏಕೈಕ ಕೂಡುಬಂಡವಾಳ ಬ್ಯಾಂಕಾಗಿ ಮುಂದುವರಿಯಿತು. ಸರಕಾರದ ಬ್ಯಾಂಕಾಗಿಯೂ ವಾಣಿಜ್ಯ ಬ್ಯಾಂಕಾಗಿಯೂ ಕಾರ್ಯನಿರ್ವಹಿಸುತ್ತಿದ್ದದ್ದು ಇದರ ವೈಶಿಷ್ಟ್ಯ.

(ಮುಂದುವರಿಯುವುದು)

ಬಿಜಾಪುರ, ಚಿತ್ರದುರ್ಗ, ತುಮಕೂರು, ಮಂಡ್ಯ, ಕೋಲಾರ, ಬಿದರೆ, ಬೆಂಗಳೂರು, ಶಿವಮೊಗ್ಗ, ಹಾಸನ ಜಿಲ್ಲೆಗಳಲ್ಲಿ ಒಂದೊಂದು ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲು ಕರ್ನಾಟಕ ಸರ್ಕಾರ ಉದ್ದೇಶಿಸಿದೆ.

ಈಗಾಗಲೇ ತುಂಗಭದ್ರಾ ಗ್ರಾಮೀಣ ಬ್ಯಾಂಕ್ (ಬಳ್ಳಾರಿ), ಕಾವೇರಿ ಗ್ರಾಮೀಣ ಬ್ಯಾಂಕ್ (ಮೈಸೂರು), ಮಲಪ್ರಭಾ ಗ್ರಾಮೀಣ ಬ್ಯಾಂಕ್ (ಧಾರವಾಡ), ಕೃಷ್ಣ ಗ್ರಾಮೀಣ ಬ್ಯಾಂಕ್ (ಕಲ್ಬುರ್ಗಿ)—ಈನಾಲ್ಕು ಜಿಲ್ಲೆಗಳಲ್ಲಿ ನಾಲ್ಕು ಗ್ರಾಮೀಣ ಬ್ಯಾಂಕುಗಳಿದ್ದು, ಅವುಗಳ ಕಾರ್ಯಾಚರಣೆ (ಸೇವೆಗಳನ್ನು ನೀಡುವುದರಲ್ಲಿ ಮತ್ತು ಶಾಖಾ ವಿಸ್ತರಣೆಯಲ್ಲಿ) ತೃಪ್ತಿಕರವಾಗಿದೆ ಎಂದು ತಿಳಿದುಬಂದಿದೆ.

# ಸುದ್ದಿ ಸಾರ

ಸ್ಯಾಂ

## ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು— ಬ್ಯಾಂಕಿಂಗ್ ಸೌಲಭ್ಯಗಳು

ಚೆಕ್ಕುಗಳ ಮತ್ತು ಹುಂಡಿಗಳ ವಸೂಲಿ, ಡ್ರಾಫ್ಟುಗಳ ಅಂಚೆ ವರ್ಗಾವಣೆ ಮತ್ತು ತಂತಿ ವರ್ಗಾವಣೆಗಳ ನೀಡಿಕೆ ಮತ್ತು/ಅಥವಾ ಇತರ ಸೇವೆಗಳನ್ನು ತಮ್ಮ ಗ್ರಾಹಕರಿಗೆ ಈಗಾಗಲೇ ಸಲ್ಲಿಸುತ್ತಿರುವ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಅವನ್ನು ಮುಂದುವರಿಸಬಹುದಾಗಿರುವಂತೆ, ಉಳಿದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ತಮ್ಮನ್ನು ಪುರೋಧಾನಗೊಳಿಸಿದ ಬ್ಯಾಂಕುಗಳೊಂದಿಗೆ ಸಮಾಲೋಚಿಸಿ ಮತ್ತು ತಮ್ಮ ಕ್ಷೇತ್ರದ ಆವಶ್ಯಕತೆಗಳನ್ನೂ ತಮ್ಮ ಸಿಬ್ಬಂದಿಯ ಕಾರ್ಯಸಾಮರ್ಥ್ಯಗಳನ್ನೂ ಗಣನೆಗೆ ತೆಗೆದುಕೊಂಡು ಅಂಥ ಸೇವೆಗಳನ್ನು ಸಲ್ಲಿಸಲು ಆರಂಭಿಸಬಹುದಾಗಿದೆ.

## ಬ್ಯಾಂಕಿಂಗ್ ಕನ್ನಡದಲ್ಲಿ ಕಾರ್ಯಶಿಬಿರ

ಬೆಂಗಳೂರಿನ ರಿಸರ್ವ್ ಬ್ಯಾಂಕ್ ಕನ್ನಡ ಸಂಘ ಕರ್ನಾಟಕ ರಾಜ್ಯ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ತರಬೇತಿ ವಿಭಾಗದ ಸಹಕಾರದೊಂದಿಗೆ ಸೆಪ್ಟೆಂಬರ್ ತಿಂಗಳಿನಲ್ಲಿ ಒಂದು ವಾರ ಕಾಲ 'ಬ್ಯಾಂಕಿಂಗ್ ಕನ್ನಡದಲ್ಲಿ ಕಾರ್ಯಶಿಬಿರ' ವನ್ನು ನಡೆಸಿತು. ತರಬೇತಿ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಅಬ್ದುಲ್ ರಹಮಾನ್ ಪಾಷಾ ಅವರ ಮಾರ್ಗದರ್ಶನದಲ್ಲಿ ಶಿಬಿರ ನಡೆಯಿತು. ಶಿಬಿರದ ಸಮಾರೋಪವನ್ನು ಇಲಾಖೆಯ ನಿರ್ದೇಶಕ ಶ್ರೀ ವಿಜಯ ಸಾಸನೂರ್ ಅವರು ಮಾಡಿದರು.

## ಹೊರದೇಶಗಳಿಗೆ ಮಕ್ಕಳ ವರ್ಷದ ವಿಶೇಷ ನಾಣ್ಯಗಳ ರವಾನೆ

ಸಾರ್ವಜನಿಕರು 'ಮಗುವಿನ ನಗು ದೇಶಕ್ಕೆ ಸೊಬಗು' ಎಂಬ ಉಕ್ತಿಯುಳ್ಳ ರೂ. 50 ರೂ. 10, 10 ಪೈಸೆ ಮತ್ತು 5 ಪೈಸೆ ಮೌಲ್ಯದ ಅಭಿವೃದ್ಧಿ ಉದ್ದೇಶಿತ ವಿನ್ಯಾಸ ನಾಣ್ಯಗಳನ್ನು ಒಮ್ಮೆಗೆ ತಲಾ ಎರಡು ನಾಣ್ಯಗಳಿಗೆ ಹೆಚ್ಚಿಲ್ಲದಂತೆ ಅನಿವಾಸಿಗಳಿಗೆ ಕೊಡುಗೆಯಾಗಿ ಭಾರತದಿಂದ ಹೊರಕ್ಕೆ ಒಯ್ಯಬಹುದು ಅಥವಾ ಕಳಿಸಬಹುದು. ನಾಣ್ಯಗಳನ್ನು ಭಾರತದಿಂದ ಹೊರಕ್ಕೆ ಕಳುಹಿಸಬಯಸುವ ವ್ಯಕ್ತಿ ಒಂದು ಲಿಖಿತ ಹೇಳಿಕೆಯನ್ನು, ನಾಣ್ಯಗಳನ್ನು ವಾಯುಮಾರ್ಗ ಅಥವಾ ಸಮುದ್ರ ಮಾರ್ಗದಿಂದ ಕಳಿಸುವುದಾದಲ್ಲಿ ವಿಮಾನ ನಿಲ್ದಾಣದಲ್ಲಿ ಅಥವಾ ಬಂದರಿನಲ್ಲಿ ಇರುವ ಸುಂಕದ ಅಧಿಕಾರಿಗಳಿಗೆ, ಇಲ್ಲವೇ ಅಂಚೆಯ ಮೂಲಕ ಕಳಿಸುವುದಾದಲ್ಲಿ ಅಂಚೆಯ ಅಧಿಕಾರಿಗಳಿಗೆ ಸಲ್ಲಿಸಬೇಕು.

## ವಾಣಿಜ್ಯ ಬ್ಯಾಂಕುಗಳ ಸಾಗರೋತ್ತರ ಶಾಖಾ ವಿಸ್ತರಣೆ

ಕಳೆದ ವರ್ಷ ಭಾರತೀಯ ಬ್ಯಾಂಕುಗಳ ಆರು ಹೊಸ ಶಾಖೆಗಳು ವಿದೇಶಗಳಲ್ಲಿ ತೆರೆಯಲ್ಪಟ್ಟುವು. ಅಮೆರಿಕದಲ್ಲಿ ಎರಡು ಶಾಖೆಗಳೂ ಪನಾಮಾ, ನಸ್ಸಾವ್, ಓಮನ್ ಶ್ರೀ ಲಂಕಾಗಳಲ್ಲಿ ತಲಾ ಒಂದೊಂದು ಶಾಖೆಯೂ ತೆರೆಯಲ್ಪಟ್ಟಿವೆ. ಇದಲ್ಲದೆ ಅಮೆರಿಕ, ನೈಜೀರಿಯ ಮತ್ತು ತಾನ್‌ಜನೀಯಗಳಲ್ಲಿ ಮೂರು ಪ್ರತಿನಿಧಿ ಕಛೇರಿಗಳು ಆರಂಭವಾದುವು. ಸರಕಾರಿ ವಲಯದ ಬ್ಯಾಂಕೊಂದು ಕುವೈತ್‌ನಲ್ಲಿ ಸ್ಥಳೀಯ ಸಂಸ್ಥೆಯೊಂದರೊಡಗೂಡಿ ಸಹಭಾಗಿತ್ವದ ಆಧಾರದ ಮೇಲೆ ಒಂದು ವಿನಿಮಯ ಕಂಪೆನಿಯನ್ನು ಸ್ಥಾಪಿಸಿ ಆ ಕಂಪೆನಿಯೊಂದಿಗೆ ಆಡಳಿತ ನಿರ್ವಹಣ ಒಪ್ಪಂದವೊಂದನ್ನು ಮಾಡಿಕೊಂಡಿದೆ. ಇನ್ನೊಂದು ಬ್ಯಾಂಕು ಹಾಂಗ್‌ಕಾಂಗಿನಲ್ಲಿ ಠೇವಣಿ ಸ್ವೀಕಾರ ಕಂಪೆನಿಯನ್ನು ಆರಂಭಿಸಿದೆ. ಭಾರತೀಯ ಬ್ಯಾಂಕುಗಳು ಈಗ 23 ದೇಶಗಳಲ್ಲಿ 127 ಸಾಗರೋತ್ತರ ಶಾಖೆಗಳ ಜಾಲವನ್ನು ಹೊಂದಿವೆ. ಜುಲೈ 1969ರಲ್ಲಿ ಬ್ಯಾಂಕುಗಳು ರಾಷ್ಟ್ರೀಕರಣವಾದಾಗ 40 ಸಾಗರಾಂತರ ಶಾಖೆಗಳಿದ್ದುವು.

## ಗ್ರಾಮೀಣ ಗೊದಾಮುಗಳ ರಸೀತಿಗಳ ಆಧಾರದ ಮೇಲೆ ಮುಂಗಡ ನೀಡಿಕೆ

ಗ್ರಾಮೀಣ ಗೊದಾಮುಗಳು ನೀಡಿದ ಉಗ್ರಾಣ ರಸೀತಿಗಳ ಆಧಾರದ ಮೇಲೆ ಕೇಂದ್ರ ಮತ್ತು ರಾಜ್ಯ ಉಗ್ರಾಣ ಮಂಡಲಿಗಳು ಪ್ರಚಲಿತ ನಿರ್ದೇಶನಗಳಿಗೊಳಪಟ್ಟ ಕೃಷಿ ಸರಕುಗಳ ಬಗ್ಗೆ ನೀಡಿದ ಉಗ್ರಾಣ ರಸೀತಿಗಳ ಆಧಾರದ

ಮೇಲೆ ವಾಣಿಜ್ಯ ಬ್ಯಾಂಕುಗಳು ನೀಡಲಾಗುವಷ್ಟೇ ಪ್ರಮಾಣದ ಮತ್ತು ಅಷ್ಟೇ ಬಡ್ಡಿದರದ ಮುಂಗಡಗಳನ್ನು ಗ್ರಾಮೀಣ ಗೋದಾಮುಗಳು ನೀಡಿದ ಉಗ್ರಾಣ ರಸೀತಿಗಳ ಆಧಾರದ ಮೇಲೂ ಅವು ನೀಡಬಹುದು—ಎಂದು ರಿಸರ್ವ್ ಬ್ಯಾಂಕು ವಾಣಿಜ್ಯ ಬ್ಯಾಂಕುಗಳಿಗೆ ತಿಳಿಸಿದೆ. ಭಾರತ ಸರಕಾರ ಗ್ರಾಮ ಪ್ರದೇಶಗಳಲ್ಲಿ ಹೆಚ್ಚುವರಿ ಶೇಖರಣಾ ಸೌಲಭ್ಯಗಳ ಬಗ್ಗೆ ನೀಡಿರುವ ಶಿಫಾರಸುಗಳಿಗೆ ಅನುಗುಣವಾಗಿ ಈ ತೀರ್ಮಾನ ತೆಗೆದುಕೊಳ್ಳಲಾಗಿದೆ. ಈ ಅವಕಾಶ ಲಭ್ಯವಾಗಬೇಕಾದರೆ ಆ ಗ್ರಾಮೀಣ ಗೋದಾಮುಗಳ ಸಿಬ್ಬಂದಿಯವರು ತರಬೇತಿ ಹೊಂದಿದವರಾಗಿರಬೇಕು. ಉಗ್ರಾಣ ಮಂಡಳಿಗಳ ಗೋದಾಮುಗಳ ಗುಣಮಟ್ಟದಲ್ಲೇ ಅವು ವ್ಯವಸ್ಥಿತವಾಗಿರಬೇಕು. ಆರ್ಥಿಕ ನೆರವು ನೀಡುವ ಬ್ಯಾಂಕುಗಳು ಈ ಗುಣಮಟ್ಟಗಳಿರುವುವೆಂಬುದರ ಬಗ್ಗೆ ಕಾಲಕಾಲಕ್ಕೆ ತನಿಖೆ ನಡೆಸಬೇಕು. ಗುಣಮಟ್ಟದಲ್ಲಿ ಇಳಿತವಾಗಿದ್ದರೆ ಒದಗಿಸಿದ ಆರ್ಥಿಕ ಸೌಲಭ್ಯವನ್ನು ಅವು ಹಿಂತೆಗೆದುಕೊಳ್ಳಬಹುದು.

## ಬ್ಯಾಂಕ್ ಉದ್ಯೋಗಿಗಳಿಗೆ ತರಬೇತಿ ಮತ್ತು ಶಿಕ್ಷಣ

ವಿಕಾಸಗತಿಯಲ್ಲಿರುವ ಬ್ಯಾಂಕಿಂಗ್ ಉದ್ದಿಮೆ ತನ್ನ ಚಟುವಟಿಕೆಗಳನ್ನು ರಾಷ್ಟ್ರೀಯ ಮತ್ತು ಪ್ರಾದೇಶಿಕ ಅಭಿವೃದ್ಧಿ ಕಾರ್ಯಕ್ರಮಗಳೊಡನೆ ಒಗ್ಗೂಡಿಸಿಕೊಳ್ಳಬೇಕಾದರೆ ನಿಷ್ಠಾವಂತ ಮತ್ತು ವೃತ್ತಿಸಮರ್ಥ ಸಿಬ್ಬಂದಿಯ ಪ್ರಾಮುಖ್ಯವನ್ನು ಕಡೆಗಣಿಸುವಂತಿಲ್ಲ. ಈ ವಿಷಯವನ್ನು ರಿಸರ್ವ್ ಬ್ಯಾಂಕಿನ ಗವರ್ನರ್ ಹಾಗೂ ಭಾರತೀಯ ಬ್ಯಾಂಕುಗಳ ಸಂಸ್ಥೆಯ ಅಧ್ಯಕ್ಷರಾದ ಡಾ॥ ಐ. ಜಿ. ಪಟೇಲ್ ಅವರು ಆಗಸ್ಟ 8ರಂದು ಮುಂಬಯಿಯಲ್ಲಿ ನಡೆದ ಸಂಸ್ಥೆಯ ವಾರ್ಷಿಕ ಸಭೆಯಲ್ಲಿ ಒತ್ತಿ ಹೇಳಿದರು.

## ಕರ್ನಾಟಕದಲ್ಲಿ ಕೃಷಿಸಾಲದ ಬಗ್ಗೆ ಅಧ್ಯಯನ ತಂಡ

ಕರ್ನಾಟಕದಲ್ಲಿರುವ ಸಹಕಾರಿ ಸಾಲ ಸಂಸ್ಥೆಗಳ ಬೆಳವಣಿಗೆಗೆ ಅಡ್ಡಿಯಾಗಿರುವ ಸಂಗತಿಗಳನ್ನು ಪರಿಶೀಲಿಸಲೂ ಅವು ರಾಜ್ಯದಲ್ಲಿಯ ಕೃಷಿ ಕಾರ್ಯಕ್ರಮಗಳಿಗೆ ತಕ್ಕುದಾದ ಬೆಂಬಲ ನೀಡಲು ಸಾಧ್ಯವಾಗುವಂತೆ ಅವುಗಳ ಕಾರ್ಯನಿರ್ವಹಣೆಯ ರೀತಿಯಲ್ಲಿ ನಿರೀಕ್ಷಿತ ಸುಧಾರಣೆಗಳನ್ನು ಜಾರಿಗೆ ತರುವುದಕ್ಕೆ ತಕ್ಕ ಮಾರ್ಗೋಪಾಯಗಳನ್ನು ಸಲಹೆ ಮಾಡಲೂ ಒಂದು ಅಧ್ಯಯನ ತಂಡವನ್ನು ರಿಸರ್ವ್ ಬ್ಯಾಂಕು ರಚಿಸಿದೆ. ರಾಜ್ಯ ಮತ್ತು ಕೇಂದ್ರ ಸಹಕಾರಿ ಬ್ಯಾಂಕುಗಳ ಆರ್ಥಿಕ ಮಟ್ಟ ಮತ್ತು ಕಾರ್ಯಸಾಮರ್ಥ್ಯ ಇವುಗಳ ಮಾಪನ; ಮೇಲ್ಕಂಡ ಬ್ಯಾಂಕುಗಳ ಸಂಪನ್ಮೂಲ ಸಂಗ್ರಹಣೆಯ ಬಗ್ಗೆ ಮತ್ತು ಅವಶ್ಯವಿದ್ದೆಡೆ ಅವುಗಳ ಪುನರ್ವ್ಯವಸ್ಥೆ ಮತ್ತು ಪುನರ್ವಸತಿಗಳ ಬಗ್ಗೆ ಮಾರ್ಗೋಪಾಯಗಳನ್ನು ಸಲಹೆ ಮಾಡುವುದು; ವಿಶೇಷ ಅಭಿವೃದ್ಧಿಗೆ ಅವಕಾಶವಿರುವ ರೇಷ್ಮೆ, ಮೀನುಗಾರಿಕೆ ಮತ್ತು ಕರಕುಶಲ ವಸ್ತುಗಳ ಕೈಗಾರಿಕೆ ಇಂತಹ ಕ್ಷೇತ್ರಗಳನ್ನು ಸಹಕಾರೀ ಕ್ಷೇತ್ರದ ಸಾಲ ನೆರವಿಗಾಗಿ ಗುರುತಿಸುವುದು; ಸಹಕಾರೀ ಸಾಲ ಕ್ಷೇತ್ರದ ಪ್ರಾಥಮಿಕ ಮತ್ತು ಮಧ್ಯಮ ಹಂತಗಳ ಸಂಸ್ಥೆಗಳು ಕೃಷಿ ಮತ್ತು ಇತರ ಚಟುವಟಿಕೆಗಳಿಗೆ ಸಾಕಷ್ಟು ಆರ್ಥಿಕ ನೆರವನ್ನು ಒದಗಿಸಲು ಸಾಧ್ಯವಾಗದ ಪಕ್ಷದಲ್ಲಿ, ಕೃಷಿ ಮತ್ತು ತತ್ಸಂಬಂಧಿ ಚಟುವಟಿಕೆಗಳಿಗೆ ಪೂರಕವಾದ ಸಾಂಸ್ಥಿಕ ವ್ಯವಸ್ಥೆಗಳನ್ನು ಸಲಹೆ ಮಾಡುವುದು—ಇವೂ ಸಂಶೋಧನ ತಂಡದ ಕಾರ್ಯಗಳಾಗಿರುತ್ತವೆ. ಪ್ರಾಥಮಿಕ ಹಂತದ ಸಂಸ್ಥೆಗಳ ಆರ್ಥಿಕ ಮಟ್ಟ ಮತ್ತು ಕಾರ್ಯನಿರ್ವಹಣೆ, ಕ್ಷಾಮಕ್ಕೀಡಾಗಬಲ್ಲ ಪ್ರದೇಶಗಳ ಸಮಸ್ಯೆಗಳು ಮತ್ತು ಅಲ್ಲಿ ಕೆಲಸ ಮಾಡುತ್ತಿರುವ ಸಾಲ ನೀಡುವ ಸಂಸ್ಥೆಗಳು—ಇವುಗಳನ್ನು ಅಧ್ಯಯನ ಮಾಡಿ ಸುಧಾರಣೆಗಳಿಗೆ ಯುಕ್ತವಾದ ಮಾರ್ಗೋಪಾಯಗಳನ್ನು ಸಲಹೆಮಾಡುವುದೇ ಅಲ್ಲದೆ, ಅವಶ್ಯವಾದ ಆಡಳಿತಾತ್ಮಕ ವ್ಯವಸ್ಥೆಗಳೂ ಸೇರಿದಂತೆ, ಸಹಕಾರೀ ಸಂಸ್ಥೆಗಳಿಗೆ ಬರಬೇಕಾದ ಬಾಕಿ ಸಾಲದ ವಸೂಲಿಗೆ ಕ್ರಮಗಳನ್ನು ಸಲಹೆ ಮಾಡಬೇಕೆಂಬುದಾಗಿಯೂ ತಂಡಕ್ಕೆ ತಿಳಿಸಲಾಗಿದೆ.

## ವಿದೇಶಿ ವಿನಿಮಯದ ಆಧಾರದ ಮೇಲೆ ಸಿಮೆಂಟ್ ಹಂಚಿಕೆಯಲ್ಲಿ ಆದ್ಯತೆ

ವಿದೇಶೀ ವಿನಿಮಯದ ಜಮೆಯ ಆಧಾರದ ಮೇಲೆ ಆದ್ಯತೆ ನೀಡಿ ಮಾಡಲಾಗುವ ಸಿಮೆಂಟ್ ಹಂಚಿಕೆಯ ವಿದೇಶಿ ವಿನಿಮಯ ರವಾನೆ ದರವನ್ನು ಟನ್ ಒಂದಕ್ಕೆ ರೂ. 600ರಿಂದ ರೂ. 700ಕ್ಕೆ ಏರಿಸಲಾಗಿದೆ. ಈ ಬಗ್ಗೆ ಬಿಡುಗಡೆ ಪತ್ರವನ್ನು ನೀಡುವ ಅಧಿಕಾರವನ್ನು ಈ ಜವಾಬ್ದಾರಿಯನ್ನು ತೆಗೆದುಕೊಳ್ಳಲಿಚ್ಛಿಸುವ ರಾಜ್ಯ ಸರ್ಕಾರಗಳಿಗೆ ಕೇಂದ್ರ ಕೈಗಾರಿಕಾ ಸಚಿವ ಶಾಖೆ ನೀಡಿದೆ.

## ರಫ್ತು ಆಭರಣಗಳಲ್ಲಿ ಚಿನ್ನದ ಅಂಶದ ಕಡಿತ

ಭಾರತದಿಂದ ರಫ್ತಾಗುವ ಆಭರಣಗಳಲ್ಲಿರುವ ಚಿನ್ನದ ಅಂಶವನ್ನು ಕಡಿಮೆ ಮಾಡಲು, ಆ ಮೂಲಕ ದೇಶದಲ್ಲಿಯ ಚಿನ್ನದ ಸಂಗ್ರಹವನ್ನು ರಕ್ಷಿಸಲು ರಿಸರ್ವ್ ಬ್ಯಾಂಕ್ ಕ್ರಮ ತೆಗೆದುಕೊಂಡಿದೆ. ಅವುಗಳಲ್ಲಿಯ ಚಿನ್ನದ ಪ್ರಮಾಣವನ್ನು ಶೇ. 40ರಿಂದ ಶೇ. 10ಕ್ಕೆ ರಿಸರ್ವ್ ಬ್ಯಾಂಕ್ ಇಳಿಸಿದೆ. ಹೊರದೇಶಗಳ ಖರೀದಿದಾರರಿಗಾಗಿ ವಿಮಾನ ಮೂಲಕವಾಗಿಯಾಗಲಿ, ಅಂಚೆ ಭಾಂಗಿಗಳ ಮೂಲಕವಾಗಿಯಾಗಲಿ, ಆಭರಣಗಳನ್ನು ರಫ್ತು ಮಾಡಲು ರಿಸರ್ವ್ ಬ್ಯಾಂಕಿನಿಂದ ವಿಶೇಷ ಅನುಮತಿ ಪಡೆದಿರುವ ರಫ್ತುದಾರರು ಈ ಬಗ್ಗೆ ಮುಂದಿನ ಮಾರ್ಗದರ್ಶನಕ್ಕಾಗಿ ಹತ್ತಿರದ ವಿನಿಮಯ ಹತೋಟಿ ಇಲಾಖೆಯ ಕಛೇರಿಯನ್ನು ಸಂಪರ್ಕಿಸಬೇಕಾಗುತ್ತದೆ.

# ಪತ್ರವ್ಯವಹಾರದಲ್ಲಿ ಸೌಜನ್ಯ-೨

**ಸೂ. ಸುಬ್ರಹ್ಮಣ್ಯಂ**

(ಹಿಂದಿನ ಸಂಚಿಕೆಯಿಂದ ಮುಂದುವರಿದುದು)

**ಉತ್ತಮ ಪತ್ರದ ಪರಿಕರಗಳು**

ಒಳ್ಳೆಯ ಪತ್ರಗಳು ಯಾವುದೇ ಸಮಾಚಾರವನ್ನು ನಾವು ಬೇರೆಯವರಿಗೆ ತಲುಪಿಸಬೇಕೆಂಬ ಆಶಯದಿಂದ ಮಾಡಿದ ಲಿಖಿತ ದಾಖಲೆಗಳಲ್ಲ. ಜನಗಳ ಮೇಲೆ ಪ್ರಭಾವ ಬೀರಲು ಅವುಗಳನ್ನು ಬಳಸದೇ ಹೋದಲ್ಲಿ ನಾವು ಅವುಗಳ ಅತ್ಯಂತ ಪರಿಣಾಮಕಾರಿ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತೇವೆ. ಕಲ್ಪನೆ ಮತ್ತು ಭಾವನಾ ಶಕ್ತಿಗಳಿಗೆ ಎಡೆಗೊಡದೆ ಕೇವಲ ತರ್ಕದಿಂದಲೇ ತೀರ್ಮಾನವಾಗಿರುವ ಪ್ರಮೇಯಗಳು ತೀರ ಕಡಿಮೆ.

ಕೇವಲ ಪ್ರಾಸಬದ್ಧ ಬರವಣಿಗೆಯೇ ಉತ್ತಮ ಪತ್ರವೆನಿಸದು; ಅದೊಂದು ಸೃಜನಾತ್ಮಕ ಚೈತನ್ಯದ ಸುಂದರ ಅಭಿವ್ಯಕ್ತಿ. ನೀರಸ ಬರಹವನ್ನು ಒಂದು ರೋಮಾಂಚಕಾರಿ ಅಭ್ಯಾಸವನ್ನಾಗಿ ಮಾರ್ಪಡಿಸುವ ಸಾಮರ್ಥ್ಯವನ್ನು ಉತ್ತಮ ಪತ್ರ ಹೊಂದಿರುತ್ತದೆ. ನಿಮ್ಮ ಮನಸ್ಸು ಅಲ್ಲಿ ಶಬ್ದಗಳಿಗೆ ಜೀವವನ್ನು ತುಂಬುತ್ತದೆ.

ನೀವು ಪತ್ರ ಬರೆಯುವವರ ಪ್ರಧಾನ ಆಸಕ್ತಿಯನ್ನು ತಿಳಿಯುವುದು ಹಾಗೂ ಅಂಥ ಆಸಕ್ತಿಗೆ ರುಚಿಸುವಂತೆ ಪತ್ರ ಬರೆಯುವುದು ಈ ಎಲ್ಲದರ ಆಧಾರ.

ಪತ್ರವೊಂದು ಬಂದ ಕೂಡಲೇ ಅದಕ್ಕೆ ಉತ್ತರವಾಗಿ ಉಕ್ತಲೇಖನವನ್ನು ನೀವು ಕೊಡಲಾರಂಭಿಸುವುದು ಸಾಧ್ಯವಾಗದು. ನೀವೇನು ಹೇಳಬೇಕೆಂಬುದನ್ನು ಆಲೋಚಿಸಿ, ಅನಂತರ ಅದನ್ನು ಹೇಗೆ ಹೇಳಬೇಕೆಂಬುದರ ಬಗೆಗೂ ಯೋಚಿಸಿ. ನಿಮ್ಮ ಪತ್ರವ್ಯವಹಾರಿಯ ಆಸಕ್ತಿಗಳೇನು ಎಂಬುದರ ಬಗ್ಗೆ ನೀವೇ ಪ್ರಶ್ನಿಸಿಕೊಂಡು ಅವುಗಳ ಬಗೆಗೆ ಬರೆಯಿರಿ. ನಿಮ್ಮ ಚಟುವಟಿಕೆಗಳ ಬಗ್ಗೆ ಕೇಳಲಾಗುವ ಪ್ರಶ್ನೆಗಳು ಎಷ್ಟೊಂದು ಕಡಮೆ ಹಾಗೂ ಬರುವ ಟೀಕೆ ಟಿಪ್ಪಣಿಗಳು ಎಷ್ಟು ನಿರಾಳವಾದವು ಎಂಬುದನ್ನು ಗಮನಿಸಿದಾಗ ನಿಮಗೇ ಆಶ್ಚರ್ಯವಾಗುತ್ತದೆ. ಯಾರಾದರೊಬ್ಬರು ಸರಿಯಾದ ಗುಂಡಿಯನೊತ್ತಿದ್ದೇ ಆದಲ್ಲಿ ಎಂಥ ಕುತೂಹಲಕಾರಿ ವಿಷಯಗಳನ್ನು ನೀವು ಹೇಳಬಹುದೆಂಬುದನ್ನು ನೀವೇ ಆಲೋಚಿಸಿರಿ:

ನೀವೊಬ್ಬರಿಗೆ ಪತ್ರ ಬರೆದಾಗ ಆ ನಿಮ್ಮ ಬಾತ್ಮೀದಾರರ ಗಮನ ಮತ್ತು ಆಸಕ್ತಿಯನ್ನು ಸೆಳೆಯುವಲ್ಲಿ ನೀವು ಇನ್ನೂ ಅನೇಕರೊಡನೆ ಸ್ಪರ್ಧಿಸುತ್ತಿರುವಿರಿ. ಅತ್ಯಂತ ಕಾವ್ಯಮಯವಾಗಿ ಅಥವಾ ವ್ಯಾಕರಣಬದ್ಧವಾಗಿ ಅಥವಾ ಅತ್ಯಂತ ನಿರರ್ಗಳವಾಗಿ ಅಥವಾ ಆಲಂಕಾರಿಕವಾಗಿ ಬರೆಯುವಾತನೇ ಜಯಶಾಲಿ ಎಂದೆನ್ನುವಂಥ ಸ್ಪರ್ಧೆ ಇದಲ್ಲ. ಯಾರು ಅತ್ಯುತ್ತಮವಾಗಿ ಮಾರ್ಗದರ್ಶನ ನೀಡಬಲ್ಲರೋ, ಸಮಾಚಾರ ಒದಗಿಸಬಲ್ಲರೋ ಮತ್ತು ಒಡಂಬಡಿಸಬಲ್ಲರೋ ಅವರಿಗೆ ಬಹುಮಾನ ಸಲ್ಲುವಂತಹ ಸ್ಪರ್ಧೆ ಇದು. ಸುದ್ದಿಯನ್ನು ತಿಳಿಸುವುದು ಪತ್ರದ ಒಂದು ಕ್ರಿಯೆ. ಅದರ ಮತ್ತೊಂದು ಕ್ರಿಯೆ, ಯಾವುದೇ ಚಟುವಟಿಕೆ ಅಥವಾ ನಂಬಿಕೆಯ ಬಗೆಗೆ ಒಡಂಬಡಿಸುವುದು. ಇವೆರಡನ್ನೂ ಒಂದು ಸ್ನೇಹಪರಭಾಷೆಯಲ್ಲಿ ಸಮ್ಮಿಳನಗೊಳಿಸಲು ಅತ್ಯಂತ ಜಾಣ್ಮೆ ಹಾಗೂ ಆರ್ದ್ರ ಹೃದಯದ ಅಗತ್ಯವಿದೆ.

ಎಲ್ಲ ಪತ್ರ ವ್ಯವಹಾರಗಳೂ ಸಭ್ಯತೆಯ ಸರಳ ನಿಯಮಗಳಿಗೆ ಬದ್ಧವಾಗಿರುತ್ತವೆ. ಆದರೆ ನೀವು ಈ ಪರಿಮಿತಿಯನ್ನೂ ದಾಟಿ ಹೋಗಬಹುದು. ನಿಮ್ಮ ಪತ್ರಗಳು ತೀರ ಸಾಮಾನ್ಯವೂ ಸಾಧಾರಣವೂ ಆಗದಿರಲಿ. ಸಾಮಾಜಿಕ ಸಂಭಾಷಣೆಗಳಲ್ಲಿ ಆತ್ಮೀಯ ಮಾತುಕತೆ ಹೇಗೆ ಆವಶ್ಯಕವೋ ಹಾಗೆಯೇ ಪತ್ರದಲ್ಲಿ ಆತ್ಮೀಯ ಬರಹದ ಅಗತ್ಯವಿದೆ. ಎರಡು ಆಲೋಚನೆಗಳ ನಡುವೆ ಅದೊಂದು ಸೇತುವೆಯಂತಾಗುತ್ತದೆ. ತಾಂತ್ರಿಕತೆ ಹಾಗೂ ಪರಿಕಲ್ಪನೆಗಳನ್ನು ಅದು ಮಾನವೀಯ ಮಟ್ಟಕ್ಕೆ ತರುತ್ತದೆ.

ಭಾವನೆಗಳಲ್ಲಿ ಪಾಲ್ಗೊಳ್ಳುವಿಕೆ ಹಾಗೂ ಹಂಚಿಕೊಳ್ಳುವಿಕೆಯ ಮನೋಧರ್ಮ ಯಶಸ್ವೀ ಸಂವಹನದ ಲಕ್ಷಣ.

ನಿಮ್ಮ ಅಭಿಪ್ರಾಯ ಮತ್ತು ಉದ್ದೇಶಗಳ ಆಂಶಿಕ ಅಭಿವ್ಯಕ್ತಿ ಇದಕ್ಕೆ ಸಹಾಯವಾಗುತ್ತದೆ.

ನಮಗೆ ಖಾತರಿಯಾಗಿರುವ ಅತಿ ಪ್ರಮುಖ ನಿರ್ವಾಹಕ ಗುಣಲಕ್ಷಣವೆಂದರೆ ನಮ್ಮ ದ್ವಿಮುಖ ಸಂವಹನದ ಸಾಮರ್ಥ್ಯ—ಒಂದು ಬಾಹ್ಯ, ಮತ್ತೊಂದು ಅಂತಸ್ಥ. ನೀವು ಬರೆಯುವಾಗ ನಿಮ್ಮ ಅರ್ಥವನ್ನು ಸುಲಭವಾಗಿಯೂ ನಿಖರವಾಗಿಯೂ ಗ್ರಹಿಸಿಕೊಳ್ಳುವ ಅವಕಾಶವನ್ನು ನಿಮ್ಮ ಓದುಗರಿಗೆ ನೀಡುವಂತೆ ತಮ್ಮ ಭಾವನೆಗಳನ್ನು ನಿಮಗೆ ಅರ್ಥವಾಗುವಂತೆ ಅಭಿವ್ಯಕ್ತಗೊಳಿಸಲು ಅವರಿಗೂ ಒಂದು ಅವಕಾಶ ಕಲ್ಪಿಸಿಕೊಡುವುದನ್ನು ಮರೆಯದಿರಿ.

### ಸೊಬಗು ಮತ್ತು ಸುಸಂಸ್ಕೃತಿ

ಗ್ರಾಹಕ ಅಥವಾ ಸರಬರಾಜುದಾರರೊಂದಿಗೆ ವಿನಿಮಯ ವಾಗುವ ಪತ್ರಗಳು ತಮ್ಮ ವ್ಯವಹಾರವನ್ನು ಕುರಿತು ನಡೆಸುವ ಮಾತುಕತೆಯಲ್ಲದೆ ಮತ್ತೇನೂ ಅಲ್ಲ. ಒಂದು ಕ್ಲಬ್ಬಿನಲ್ಲಿಯೋ ಚಹಾಗೋಷ್ಠಿಯಲ್ಲಿಯೋ ನೀವು ಬಳಸುವ ಭಾಷೆಯ ಸೊಬಗು ಮತ್ತು ಸುಸಂಸ್ಕೃತಿ ಅವುಗಳಲ್ಲಿರಬೇಕು.

ಅಂಚೆಯ ಮೂಲಕ ನಡೆಸುವ ಇಂಥ ಸಂಭಾಷಣೆಗಳಲ್ಲಿ ನೀವು ಈ ಬಗೆಯ ಸನ್ನಿವೇಶಗಳನ್ನು ಎದುರಿಸುವಿರಿ. ಕೆಲವೊಮ್ಮೆ ನೀವು ಸರಿಯಾಗಿರುವಿರಿ; ಕೆಲವೊಮ್ಮೆ ನೀವಿಬ್ಬರೂ ಭಾಗಶಃ ಸರಿಯಾಗಿರುವಿರಿ; ಮತ್ತೆ ಕೆಲವೊಮ್ಮೆ ಆ ವ್ಯಕ್ತಿ ಸರಿಯಾಗಿರಬಹುದು. ಈ ಎಲ್ಲ ಸಾಧ್ಯತೆ ಗಳಿಂದಾಗಿ ನೀವು ಅರ್ಥಂಬರ್ಥ ಗ್ರಹಿಸುವುದಕ್ಕಿಂತ ಹೆಚ್ಚಿನ ಗಮನವನ್ನು ಹರಿಸುವುದು ಅಗತ್ಯ. ನಿಮ್ಮ ಬಾತ್ಮೀದಾರ ಹೇಳುತ್ತಿರುವುದು ಸರಿಯಿಲ್ಲದಿರಬಹುದು. ಆದರೂ ನಿಮ್ಮ ಆಲೋಚನೆಯನ್ನು ಕೇಂದ್ರೀಕರಿಸಲು ಅದು ಸಹಾಯಕ ವೆನಿಸುತ್ತದೆ. ಪ್ರಾಚೀನ ಕಾಲದ ಮಹಾವಾಗ್ಮಿ ಸಿಸೆರೋ ತನ್ನ ಎದುರಾಳಿಯ ವಿದ್ಯಮಾನಗಳನ್ನು ತನ್ನದಕ್ಕಿಂತ ಹೆಚ್ಚಲ್ಲದಿದ್ದರೂ ಅಷ್ಟೇ ಗಾಢವಾಗಿ ಅಧ್ಯಯನ ಮಾಡು ತ್ತಿದ್ದನೆಂದು ಹೇಳಿಕೊಂಡಿದ್ದಾನೆ. ಯಾರಿಗೆ ಕೇವಲ ತನ್ನ ಪಕ್ಷದ ಅಂಶಗಳಷ್ಟೇ ತಿಳಿದಿರುವುದೋ ಅವನಿಗೆ ಅದರ ಬಗ್ಗೆ ಏನೂ ತಿಳಿಯದೆಂದು ಸಿಸೆರೋ ನಂಬಿದ್ದ.

ಸಮಸ್ಯಾತ್ಮಕ ಸಲಹೆಯೊಂದನ್ನು ಮುಂದಿಟ್ಟಾಗ ಎರಡು ಕಾರಣಗಳಿಂದಾಗಿ ಅದನ್ನು ಸರಳವಾಗಿಯೂ ಸ್ಪಷ್ಟ ವಾಗಿಯೂ ಪುನಃ ಒತ್ತಿ ಹೇಳಿ—ಒಂದು, ನೀವಿಬ್ಬರೂ ಒಂದೇ ವಿಷಯದ ಬಗ್ಗೆ ಬರೆಯುತ್ತಿರುವಿರಿ ಎಂಬುದನ್ನು ಖಚಿತಗೊಳಿಸಲು; ಮತ್ತೊಂದು, ನಿಮ್ಮ ಗ್ರಹಿಕೆ ಮತ್ತು ಸಹಾನುಭೂತಿಯನ್ನು ಅಭಿವ್ಯಕ್ತಗೊಳಿಸಲು.

ಪ್ರತಿಯೊಬ್ಬ ವಿವೇಕಿಯೂ ತನ್ನ ಆಲೋಚನೆ, ಯೋಜನೆ ಗಳನ್ನು ಮೊತ್ತಮೊದಲಿಗೆ ಮುಂದಿಟ್ಟಾಗ ಆಕ್ಷೇಪಣೆಗಳನ್ನೂ ವಿರೋಧಗಳನ್ನೂ ನಿರೀಕ್ಷಿಸುತ್ತಾನೆ ಹಾಗೂ ಸ್ವಾಗತಿಸು ತ್ತಾನೆ. ಇಂಥ ಬಹಿರಂಗ ವಿರೋಧವನ್ನು ಸಂಧಿಸಿ ಅದಕ್ಕೆ ಕಾರಣಕರ್ತರಾದವರನ್ನು ಬೇರೆ ಬಗೆಯ ಆಲೋಚನೆಯತ್ತ ಕೊಂಡೊಯ್ಯಲು ನೆರವಾಗುವ ಕಾರಣಕ್ಕಾಗಿ ಅವನು ಅದನ್ನು ಮೆಚ್ಚುತ್ತಾನೆ.

ಈ ರೀತಿಯ ಲಿಖಿತ ಸಂಭಾಷಣೆಯನ್ನು ಪರಿಣಾಮ ಕಾರಿಯಾಗಿ ಬೆಳೆಸಿಕೊಂಡು ಹೋಗುವಲ್ಲಿ ಏರುಪೇರಿಲ್ಲದ ಹಾಳತ ಹಾಗೂ ಸೌಜನ್ಯಯುತ ಪದವಿನ್ಯಾಸ ಅತಿ ಮುಖ್ಯವಾದುದು. ನಮಗೆ ಗೊತ್ತಿರುವಂತೆ, ಎಷ್ಟೋ ಮಂದಿ ತಮ್ಮ ನಿಲುವು ಸರಿಯಾಗಿದ್ದರೂ ಸಹ ನಾವು ಅದರಿಂದ ಹಿಂಜರಿಯುವಂತೆ ಕರ್ಕಶವಾಗಿ ನಿರೂಪಿಸಿರು ತ್ತಾರೆ.

### ಸ್ಪಷ್ಟತೆಯಿರಲಿ

ನೀವು ಬರೆದಿರುವುದು ಬೇರೊಬ್ಬರಿಗೆ ಅರ್ಥವಾಗುವುದು ಕಷ್ಟವೆಂದು ಕಂಡುಬಂದಲ್ಲಿ ನೀವು ಎಷ್ಟು ಸ್ಪಷ್ಟವಾಗಿ ಹೇಳಬಹುದಿತ್ತೋ ಅಷ್ಟು ಸ್ಪಷ್ಟವಾಗಿ ಬರೆದಿರುವಿರಾ ಎಂದು ಮೊದಲು ಆಲೋಚಿಸಿ. ತಪ್ಪು ನಿಮ್ಮಲ್ಲಿಯೇ ಇರಬಹುದು. ಮತ್ತೊಬ್ಬರ ಬುದ್ಧಿಸಾಮರ್ಥ್ಯವನ್ನು ಬದಲಾಯಿಸುವುದಕ್ಕಿಂತ ನಮ್ಮಲ್ಲಿಯ ತಪ್ಪನ್ನೇ ತಿದ್ದಿ ಕೊಳ್ಳುವುದು ಹೆಚ್ಚು ಸುಲಭವಾದುದು.

ಓದಿದ್ದನ್ನು ಮಾನಸಿಕವಾಗಿ ಅರಗಿಸಿಕೊಳ್ಳಲು ಜನರಿಗೆ ತಮ್ಮದೇ ಆದ ಬೇರೆಬೇರೆ ಕಾಲಗಳು ಬೇಕಾಗುತ್ತವೆ. ಆದರೆ ಪ್ರತಿಯೊಬ್ಬನಿಗೂ ತಾನು ಓದಿದ್ದನ್ನು ಗ್ರಹಿಸಿಕೊಳ್ಳಲು ಸ್ವಲ್ಪ ವೇಳೆಯ ಅಗತ್ಯವಿದೆ. ನಮ್ಮ ಪತ್ರವ್ಯವಹಾರದಲ್ಲಿ ಈ ವಿಷಯಕ್ಕೆ ಆಸ್ಪದವಿತ್ತು ವಿವರಣೆಯನ್ನು ಸರಳವಾಗಿ ನಿರೂಪಿಸುವುದರ ಮೂಲಕ ಜೀರ್ಣಿಸಿಕೊಳ್ಳುವ ಕ್ರಿಯೆ ಸುಲಭವಾಗುವಂತೆ ಮಾಡಬಹುದು. ನಿಮ್ಮ ಪತ್ರ ವ್ಯವಹಾರಿಯ ಒಂದು ದೃಷ್ಟಿಕೋನವನ್ನು ಅದರ ವಿರುದ್ಧ ದಿಕ್ಕಿಗೆ ಕೊಂಡೊಯ್ಯುವಲ್ಲಿ ದಾಪುಗಾಲು ಹಾಕುತ್ತ ಹೋಗು ವುದಕ್ಕಿಂತ ಚಿಕ್ಕ ಚಿಕ್ಕ ಹೆಜ್ಜೆಗಳ ಮೂಲಕ ಸಾಗುವುದು ಹೆಚ್ಚು ಸುಲಭವಾದುದು. ನೀವು ಒಂದಕ್ಕಿಂತ ಹೆಚ್ಚಿನ ಮಾರ್ಗಗಳನ್ನು ಶೋಧಿಸಿದ್ದು, ಅವುಗಳೆಲ್ಲದರ ಸಾಧ್ಯಾ ಸಾಧ್ಯತೆಯನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಿರುವ ಅಂಶವನ್ನು ಅವರ ಗಮನಕ್ಕೆ ತನ್ನಿ.

ನಿಮ್ಮ ಪತ್ರ ವ್ಯವಹಾರಿಯ ಆತ್ಮಗೌರವ ಉಳಿಸಿಕೊಳ್ಳುವ ಮಾರ್ಗವೊಂದನ್ನು ಯಾವಾಗಲೂ ತೆರೆದಿಟ್ಟಿರಿ. ಪ್ರಾಚೀನ ಚೀನಿಯರ "ಮುಖಭಂಗ" ಸಿದ್ಧಾಂತದ ಬಗ್ಗೆ ಸಾಕಷ್ಟೇ ಹೇಳುವುದಿದೆ.

ನಿಮ್ಮ ಹಿಡಿತವನ್ನು ಯಾವಾಗ ಸಡಿಲಗೊಳಿಸಬೇಕು ಎಂಬುದನ್ನು ತಿಳಿದುಕೊಂಡಿರಿ. ಸಾರ್ವಭೌಮನೊಡನೆ ತತ್ವಜ್ಞಾನಿಯೊಬ್ಬ ವಾದಕ್ಕಿಳಿದು ಸೋತಾಗ "ಐವತ್ತು ಸೈನ್ಯ ದಳಗಳ ಒಡೆಯನೊಬ್ಬನಿಂದ ಪರಾಭವಗೊಂಡುದರಿಂದ ನನಗೇನೂ ಅಪಮಾನವಿಲ್ಲ" ಎಂದನಂತೆ.

ನಿಮ್ಮ ಪತ್ರವ್ಯವಹಾರಿಯ ತಪ್ಪು ಗ್ರಹಿಕೆಯನ್ನು ಕೇವಲ ಸರಿಗೊಳಿಸುವುದು ಅಷ್ಟೇನೂ ತೃಪ್ತಿದಾಯಕವಲ್ಲ. ಅದನ್ನು ಸರಿಯಾದ ಚಿಂತನೆಯ ಮಾರ್ಗದಲ್ಲಿ ತೊಡಗಿಸುವುದು ಅಷ್ಟೇ ಆವಶ್ಯವಾದುದು. ನಿಮ್ಮ ವೈಯಕ್ತಿಕ ಆಸಕ್ತಿ ಗಣನೆಗೆ ಬರಬಹುದಾದ ಮತ್ತೊಂದು ಕ್ಷೇತ್ರವಿದು. ಸಾವಿರ ಮಸಿಕುಡಿಕೆಗಳೊಳಗೆ ಸಾವಿರ ಲೇಖನಿಗಳನ್ನದ್ದಿಯೂ ನಿಮ್ಮ ಬಾತ್ಮೀದಾರನ ಮನಸ್ಸನ್ನು ಒಂದಿನಿತೂ ಮುಂದಕ್ಕೊಯ್ಯಲಾಗದಿರಬಹುದು. ಆದರೆ ಆತನಲ್ಲಿ ಆಸಕ್ತಿಯನ್ನುಂಟುಮಾಡುವಂಥ ಪದಗುಂಫನವನ್ನು ನಿಮ್ಮ ಮನೋಭೂಮಿಕೆಯಿಂದ ತೆಗೆದು ಮುಂದಿಟ್ಟಾಗ ಆತ ನಿಮ್ಮ ಪ್ರಭಾವಕ್ಕೊಳಗಾಗುತ್ತಾನೆ.

ಮೋಹಕ ವಿಧಾನಗಳು ಶೀಘ್ರ ವಿಜಯಿಗಳಾಗಿರುತ್ತವೆ. ನಿಮ್ಮ ಪತ್ರವ್ಯವಹಾರಿಯ ಬಗೆಗಿರುವ ನಿಮ್ಮ ಕಾಳಜಿ ಹಾಗೂ ಹಿತಾಸಕ್ತಿಯನ್ನು ಈ ವಿಧಾನಗಳು ವ್ಯಕ್ತಪಡಿಸುತ್ತವೆ. ಅನೇಕ ಸಲ ಬುದ್ಧಿವಂತಿಕೆಯ ಸಂಧಾನ ಹೇಡಿತನದ ಲಕ್ಷಣವೆನಿಸಿಕೊಳ್ಳದೆ ಧೈರ್ಯದಿಂದ ಕೂಡಿದ ಜಾಣತನದ ಸಾರಸಂಗ್ರಹವಾಗಿರುತ್ತದೆ. ನಿಮ್ಮ ಪತ್ರವ್ಯವಹಾರಿಗೆ ಬಹುಮುಖ್ಯವೆನಿಸಬಹುದಾದ ಸಣ್ಣ ವಿಷಯಗಳಲ್ಲಿ ನಿಮ್ಮ ಬಿಗಿತನವನ್ನು ನೀವು ಸಡಿಲಗೊಳಿಸಿದ್ದೇ ಆದಲ್ಲಿ ಆಗ ನಿಮ್ಮ ದೃಷ್ಟಿಯಲ್ಲಿ ಅತ್ಯಮೂಲ್ಯವೆನಿಸಬಹುದಾದ ಅಂಶಗಳ ಬಗ್ಗೆ ಆತ ತನ್ನ ಔದಾರ್ಯವನ್ನು ಮೆರೆಯಬಹುದು.

ಪತ್ರವೊಂದರಲ್ಲಿ ನಿಮ್ಮ ಪತ್ರವ್ಯವಹಾರಿಯು ಮೊತ್ತಮೊದಲಿಗೆ ಗುರುತಿಸಲೆತ್ನಿಸುವ ಅಂಶವೆಂದರೆ ಸೌಹಾರ್ದತೆ. ಅನಂತರ ಯಾವುದೇ ರೀತಿಯ ಭಾವಪರವಶ ಪ್ರತಿಕ್ರಿಯೆಯನ್ನು ಅವನು ಹುಡುಕಬಯಸುತ್ತಾನೆ.

ಪತ್ರಗಳಲ್ಲಿ ಅಲ್ಲಲ್ಲಿ ಸೇರಿಸಲು ನಿಮ್ಮ ಸನಿಹದಲ್ಲಿ ಅನೇಕ ಆಹ್ಲಾದಕರ ಶಬ್ದಗಳು ಮತ್ತು ಮಧುರ ಭಾವನೆಗಳನ್ನು ಹೊಂದಿರುವುದರಿಂದಷ್ಟೇ ಇದು ಸಾಧ್ಯವಾಗದು. ಅಂಥ ಪಟ್ಟಿಯಿಂದ ನಿಮ್ಮ ಭಾವನೆಗಳ ಅಭಿವ್ಯಕ್ತಿಗೆ ಸಹಾಯವಾಗಬಹುದು. ಆದರೆ ನಿಮ್ಮ ಸೌಹಾರ್ದ ನೈಜವಾಗಿರದಿದ್ದಲ್ಲಿ ಆಗ ನೀವು ಸೋಗಿನ ಆಟ ಹೂಡುತ್ತಿರುವಿರಿ.

ಪಟ್ಟಿಯಲ್ಲಿ ಅನಂತರ ಬರುವುದು, ಅಥವಾ ಪಟ್ಟಿಯಲ್ಲಿ ಪ್ರಾಯಶಃ ಇದೇ ಮೊದಲನೆಯದಾಗಿರಬೇಕಾದುದು, ನಿಮ್ಮ ಉತ್ತರ ಒಡನೆಯೇ ಬರಬೇಕೆಂಬ ನಿಮ್ಮ ಪತ್ರವ್ಯವಹಾರಿಯ ಬಯಕೆ. ಪತ್ರ ಎಂಥದಿರಬೇಕು, ಎಷ್ಟು ದೀರ್ಘವಾಗಿರಬೇಕು ಮೊದಲಾದ ಹಲವಾರು ಅಂಶಗಳ ಬಗೆಗೆ ಜನ ತಮ್ಮತಮ್ಮವೇ ಭಾವನೆಗಳನ್ನು ಹೊಂದಿರಬಹುದು. ಆದರೆ ಒಡನೆಯೇ ಬರೆಯಬೇಕಾದುದರ ಅಗತ್ಯದ ವಿರುದ್ಧ ಯಾರೂ ಯಶಸ್ವಿಯಾಗಿ ವಾದಿಸಲಾರರು.

ಕೆಲವೊಂದು ಕಛೇರಿಗಳಲ್ಲಿ ಬಂದ ಪತ್ರಗಳ ಬಗೆಗೆ ಕ್ರಮ ತೆಗೆದುಕೊಳ್ಳುವುದು ನಿಧಾನವಾಗಬಹುದಾದರೂ ಬಂದ ಎಲ್ಲ ಪತ್ರಗಳಿಗೂ ಕೂಡಲೇ ಸ್ಲಿಕೆ ಕೊಡುವ ಪರಿಪಾಠವಿದೆ. ಈ ಸೌಜನ್ಯಯುತ ನಡಾವಳಿ ಓದುಗನಲ್ಲಿ ಆತನ ಪತ್ರ ತಲುಪಿದ ಹಾಗೂ ಅದಕ್ಕೆ ಅಗತ್ಯ ಪ್ರಮಾಣದ ಗಮನ ನೀಡುವ ಬಗ್ಗೆ ನಂಬುಗೆಯುಂಟುಮಾಡಲು ನೆರವಾಗುತ್ತದೆ.

### ವಿವೇಚನೆ

ಪತ್ರ ಬರೆಯುವವರು ಮನಸ್ಸಿನಲ್ಲಿಟ್ಟುಕೊಳ್ಳಬೇಕಾದ ಒಂದು ಒಳ್ಳೆಯ ಪದ, ವಿವೇಚನೆ. ಹೊಗಳುವಾಗಲಾಗಲಿ ತೆಗಳುವಾಗಲಾಗಲಿ ಹೆಚ್ಚಿನ ಸಲಿಗೆ ತೆಗೆದುಕೊಳ್ಳಬೇಡಿ. ಆತ್ಮೀಯತೆಯ ನೆಪದಿಂದ ಒರಟು ನಡವಳಿಕೆ ಅಥವಾ ಅನಾವಶ್ಯಕವೆನಿಸುವಲ್ಲಿ ನಿಜ ನುಡಿಯುವುದು ಕ್ಷಮಾರ್ಹವೆನಿಸದು. ಪತ್ರ ಬರೆಯುವಾಗಿನ ಅನೇಕ ಲೋಪದೋಷಗಳನ್ನು ಯುಕ್ತಾಯುಕ್ತ ಪರಿಜ್ಞಾನ ಸರಿದೂಗಿಸಬಲ್ಲುದು.

ಸೌಮ್ಯವಾಗಿರಬೇಕು ಹಾಗೂ ಸಂಧಿ ಮಾಡಿಕೊಳ್ಳಬೇಕೆಂಬ ನಿಮ್ಮೆಲ್ಲ ಪ್ರಯತ್ನಗಳು ನಡೆದಿದ್ದೂ ನಿಮ್ಮ ಪತ್ರವ್ಯವಹಾರಿಯ ನಿಲುವನ್ನು ಒಪ್ಪಲಾಗದಿದ್ದರೆ ಆಗ ನಿಮ್ಮ ವಿರೋಧವನ್ನು ನಯವಿನಯದಿಂದಲೇ ನಿರೂಪಿಸಿ. ಕೊನೆಯ ತೀರ್ಪುಗಳನ್ನು ಕೊಡಹೋಗಬೇಡಿ. ಅಧಿಕಾರಯುಕ್ತ ನಿರೂಪ ರೈಲು ವೇಳಾಪಟ್ಟಿಗೆ ಸರಿಹೊಂದಬಹುದು; ಆದರೆ ವ್ಯಾವಹಾರಿಕ ಅಥವಾ ವೈಯಕ್ತಿಕ ಸಮಸ್ಯೆಯ ಬಗೆಗಿನ ಚರ್ಚೆಯಲ್ಲಿ ಅದಕ್ಕಾವ ಸ್ಥಾನವೂ ಇರುವುದಿಲ್ಲ.

ಅತಿಶ್ರೇಷ್ಠ ಮೇಧಾಶಕ್ತಿಯೆಂದರೆ ಯಾವಾಗ ಹಿಂಜರಿಯಬೇಕೆಂಬುದರ ಅರಿವು. ಮತ್ತೆ, ಬಿಟ್ಟುಹೋಗುವಾಗಲೂ ಸೌಹಾರ್ದದಿಂದ ಬಿಡುವುದು ಸೂಕ್ತ. ಅದರಿಂದಾಗಿ ನಿರ್ಬಂಧದ ಎಲ್ಲ ಕೋಟೆಗಳನ್ನೂ ತೊಡೆದು ಹಾಕಿ ಐದನೆಯ ಹೆನ್ರಿ ದೊರೆಯ ಯೋಧರಂತೆ ಯಾವುದೇ ವಾದಕ್ಕೆ ಆಸ್ಪದವಿಲ್ಲವಾಗಿ ನಿಮ್ಮ ಖಡ್ಗಗಳನ್ನು ಒರೆಯೊಳಕ್ಕೆ ಸೇರಿಸಬಹುದು.

### ದೂರಿನ ಪತ್ರಗಳ ನಿಭಾವಣೆ

ವ್ಯವಹಾರದಲ್ಲಿ ದೂರಿನ ಪತ್ರಗಳನ್ನು ಉತ್ತರಿಸುವುದಕ್ಕಿಂತ ಹೆಚ್ಚು ಕಠಿಣವಾದ ಅಭ್ಯಾಸ ಮತ್ತೊಂದಿಲ್ಲ. ಇಲ್ಲದ ಮನಸ್ಸಿನಿಂದ ಅದನ್ನು ಮಾಡುವುದು ಸಲ್ಲ.

ದೂರು ಹೊತ್ತ ಪತ್ರ ನಿಮ್ಮ ಪತ್ರ ವ್ಯವಹಾರಿಯೊಂದಿಗೆ ಸಂಭವಿಸಬಹುದಾದ ಒಡಕಿನ ಬಗೆಗಿನ ಮುನ್ನೆಚ್ಚರಿಕೆ. ನಿಮ್ಮ ಸೇವೆಯನ್ನು ಹೇಗೆ ಉತ್ತಮಗೊಳಿಸಬಹುದೆಂಬ ಬಗ್ಗೆ ಅದೊಂದು ರಚನಾತ್ಮಕ ಸಲಹೆಯೆಂದು ನೀವು

ಪರಿಗಣಿಸುವುದು ಅತ್ಯಂತ ಪರಿಣಾಮಕಾರಿಯಾದ ತಂತ್ರ. ನಿಮಗೆ ಉಪಕಾರವಾಗಿರುವುದಾಗಿ ನಿಮ್ಮ ಪತ್ರವ್ಯವಹಾರಿಗೆ ತಿಳಿಸಿರಿ. ಸೌಮ್ಯ ಸ್ವರೂಪದ ನಿಮ್ಮ ಸಂಧಾನಾತ್ಮಕ ಮನೋಧರ್ಮವು ಪತ್ರವ್ಯವಹಾರಿಯನ್ನು ಸಮಾಧಾನ ಗೊಳಿಸಿ ನೀವು ಸೂಚಿಸುವ ಸಲಹೆಗಳಿಗೆ ಹೊಂದಿಕೊಳ್ಳು ವಂತೆ ಮನವೊಲಿಸುತ್ತದೆ.

ಎಲ್ಲಕ್ಕಿಂತ ಮಿಗಿಲಾಗಿ, ನೀವಾಗಲಿ ನಿಮ್ಮ ಸಂಸ್ಥೆಯಾಗಲಿ ತಪ್ಪು ಮಾಡಿದ್ದಲ್ಲಿ ಕೂಡಲೆ ಅದನ್ನು ಪೂರ್ಣ ಮನಸ್ಸಿನಿಂದ ಒಪ್ಪಿಕೊಳ್ಳಿರಿ. ತಪ್ಪಿನ ಬಗೆಗೆ ಕುಂಟು ನೆಪ ಹೇಳುತ್ತಾ ಅಥವಾ ಕ್ರಮಕ್ರಮವಾಗಿ ತಪ್ಪೊಪ್ಪಿಗೆ ನೀಡುವ ಬದಲು 'ನೀವು ಹೇಳುತ್ತಿರುವುದು ಸರಿ' ಅಥವಾ 'ನೀವು ದೂರುವು ದರಲ್ಲಿ ಸತ್ಯವಿದೆ' ಎಂದು ನೇರವಾಗಿ ತಿಳಿಸಿರಿ. 'ಯಾವ ಮನುಷ್ಯ ತಾನೊಂದು ತಪ್ಪು ಮಾಡಿದ್ದು ಅದನ್ನು ತಿದ್ದಿ ಕೊಳ್ಳುವುದಿಲ್ಲವೋ ಅವನು ಮತ್ತೊಂದು ತಪ್ಪೆಸಗುತ್ತಿದ್ದಾನೆ' ಎನ್ನುವುದು ಕನ್‌ಫ್ಯೂಷಿಯಸ್‌ನ ಅತ್ಯಂತ ಪ್ರಖ್ಯಾತ ಹೇಳಿಕೆ ಗಳಲ್ಲೊಂದಾಗಿದೆ.

ಬಂದ ದೂರಿನ ಬಗೆಗೆ ಹಾಸ್ಯ ಮಾಡುವುದು ಎಂದೂ ಕ್ಷೇಮವಲ್ಲ. ದೂರು ಹೊತ್ತು ಬರುವವರು ಸಾಮಾನ್ಯವಾಗಿ ಸಹಾನುಭೂತಿಯನ್ನು ಬಯಸುತ್ತಾರೆಯೇ ಹೊರತು ಹಾಸ್ಯವನ್ನಲ್ಲ. ಅಣಕ ನುಡಿ ಒಂದು ತೀಕ್ಷ್ಣ ಆಯುಧ ವಾಗಿದ್ದು ಅದು ಆಳವಾದ ಗಾಯವನ್ನುಂಟುಮಾಡುವುದು ಶತಸ್ಸಿದ್ಧ. ನಿಮ್ಮ ಪತ್ರವ್ಯವಹಾರಿಯನ್ನು ಹಾಸ್ಯಾಸ್ಪದ ವಾಗಿ ತೋರಲೆತ್ನಿಸುವುದು ನಿಮಗೆ ಅಲ್ಪತೃಪ್ತಿಯನ್ನು ನೀಡ ಬಹುದಾದರೂ ಅದು ನಿಮಗೆ ಅಥವಾ ನಿಮ್ಮ ಸಂಸ್ಥೆಗೆ ತೀವ್ರ ಅಪಾಯಕಾರಿ ಪರಿಣಾಮವನ್ನುಂಟುಮಾಡುವುದು.

ತಪ್ಪಿನ ಬಗೆಗಿನ ನಿಮ್ಮ ಕ್ಷಮಾಯಾಚನಾ ಪತ್ರವನ್ನು ಕಣ್ಣೀರಿನಿಂದಲೇನೂ ಲೇಪಿಸಬೇಕಾಗಿಲ್ಲ. ಆದರೆ ಅದು ಪ್ರಾಮಾಣಿಕವಾಗಿದ್ದು ನಿಮ್ಮ ಋಜುತ್ವವನ್ನೂ ಘನತೆ ಯನ್ನೂ ಸಮರ್ಥಿಸಬೇಕು. ವಿಕ್ಟೋರಿಯಾ ರಾಣಿಯು ತನ್ನ ದಿನಚರಿಯಲ್ಲಿ ಬರೆದಿರುವಂತೆ, 'ಬೇರೊಬ್ಬರು ತಮ್ಮ ತಪ್ಪನ್ನೊಪ್ಪಿಕೊಂಡು ದುಃಖವನ್ನೋ ವಿಷಾದವನ್ನೋ ವ್ಯಕ್ತ ಪಡಿಸಿದಾಗ ಜನ ತಮಗಾದ ಅವಮಾನ ಅಥವಾ ಅನ್ಯಾಯ ವನ್ನು ಕೂಡಲೆ ಮರೆಯುತ್ತಾರೆ.' ನಿಮ್ಮ ಸಂಸ್ಥೆಯ ಜವಾಬ್ದಾರಿಯುತ ಹಿರಿಯ ಅಧಿಕಾರಿಯೊಬ್ಬರು ಕ್ಷಮಾ ಯಾಚನಾ ಪತ್ರಕ್ಕೆ ಸಹಿ ಹಾಕಬೇಕು. ದೂರನ್ನಿತ್ತವರಿಗೆ ತಾವು ಗಣನೀಯ ವ್ಯಕ್ತಿಯೆಂಬುದನ್ನು ಅದು ಪ್ರತಿಪಾದಿಸು ತ್ತದೆ.

## ಒಂದು ಸಂವಹನ ಮಾರ್ಗ ತೆರವಿರಲಿ

ದೂರಿನ ಪತ್ರಗಳನ್ನು ನಿಮ್ಮವರು ಶೇಖರಿಸಿಟ್ಟುಕೊಳ್ಳ ದಿರಲಿ. ಯಾವಾಗಲೂ ಒಂದು 'ಸಂವಹನ ಮಾರ್ಗ' ವನ್ನು ತೆರೆದಿಟ್ಟಿರಿ. ಒಬ್ಬ ನೌಕರ ದೂರೊಂದನ್ನು ತನ್ನ ಮ್ಯಾನೇಜರರಿಗೆ ಕಳುಹಿಸುವುದು ಸೂಕ್ತವೆಂದು ನಿರ್ಧರಿಸಲು ಅರ್ಧ ದಿನವನ್ನು ತೆಗೆದುಕೊಂಡರೆ, ತನ್ನ ನೌಕರರಲ್ಲಿ ಅಥವಾ ತನ್ನ ಸಂಸ್ಥೆಯಲ್ಲಿ ಏನೋ ತಪ್ಪಿರುವುದೆಂದು ಹೇಳಿದ ಗ್ರಾಹಕನ ಅಭಿಪ್ರಾಯ ಸರಿಯೆಂದು ಕೊನೆಗೆ ಒಪ್ಪುವು ದಕ್ಕೆ ಮುಂಚೆ ಮ್ಯಾನೇಜರ್ ಅನಿಶ್ಚಯತೆಯಿಂದ ಒಂದು ದಿನ ದೂಡಿದರೆ ಮತ್ತು ನಿಮ್ಮ ಸಹಾಯಕರಲ್ಲೊಬ್ಬ ನೀವು ಪ್ರಸನ್ನಚಿತ್ತರಾಗುವವರೆಗೂ ಪತ್ರವನ್ನು ತಡೆಹಿಡಿದುದೇ ಆದರೆ—ಆಗ, ತ್ವರಿತ ಕ್ರಮದ ಅತ್ಯಮೂಲ್ಯ ಅವಕಾಶ ವನ್ನು ನೀವು ಕಳೆದುಕೊಳ್ಳುತ್ತೀರಿ.

ಸೌಜನ್ಯ ಯಾವುದೇ ಸವಾಲು ಅಥವಾ ಕ್ರಿಯೆಗೆ ಮಾತ್ರ ಪ್ರತಿವರ್ತನೆಯಲ್ಲ. ಅದು ಬಹಿರ್ಮುಖವಾದುದು; ಅಭಿ ವ್ಯಕ್ತಿಗಾಗಿ ಸಾಧನಗಳ ಶೋಧನೆಯಲ್ಲಿ ತೊಡಗಿರುವಂಥದು. ಹರಿತ ನಾಲಿಗೆಯ ಜಾರ್ಜ್ ಬರ್ನಾರ್ಡ್ ಷಾ, 'ನಮ್ಮ ಸಹಜೀವಿಗಳಿಗೆ ನಾವು ಮಾಡಬಹುದಾದ ಮಹಾಪಾಪದ ಕಾರ್ಯವೆಂದರೆ ಅವರನ್ನು ದ್ವೇಷಿಸುವುದಲ್ಲ, ಅವರ ಬಗೆಗೆ ಉದಾಸೀನದಿಂದಿರುವುದು' ಎಂದಿದ್ದಾನೆ.

ಒಳ್ಳೆಯ ಕೆಲಸ ಅಥವಾ ಕ್ರಿಯೆಗಳನ್ನು ಹೃತ್ಪೂರ್ವಕ ವಾಗಿ ಹೊಗಳುವುದೆಂದರೆ ಸ್ವಲ್ಪಮಟ್ಟಿಗೆ ಅದರಲ್ಲಿ ನಾವೂ ಪಾತ್ರ ವಹಿಸಿದಂತೆಯೇ ಎನ್ನಬಹುದು. ಅನೇಕ ವೇಳೆ ಜನರೊಡನೆ ಕಠಿಣವಾಗಿ ವರ್ತಿಸುವುದರ ಆವಶ್ಯಕತೆಯಿರು ವುದರಿಂದ, ಗಮನಿಸಬಹುದಾದಂಥ ಅವಕಾಶಗಳನ್ನು ಬಳಸಿ ಕೊಂಡು ಅವರನ್ನು ಅಭಿನಂದಿಸುವುದು ವಿವೇಕಯುತ ವಾದುದು. ಡಾ॥ ಸ್ಯಾಮುಯಲ್ ಜಾನ್‌ಸನ್ ಲಾರ್ಡ್ ಚೆಸ್ಟರ್‌ಫೀಲ್ಡ್ ಅವರಿಗೆ ಒಮ್ಮೆ ವ್ಯಥೆಯಿಂದ ಹೀಗೆಂದರು: 'ನಾನೇನೆಲ್ಲ ಮಾಡಬಹುದೋ ಅಷ್ಟನ್ನೂ ಮಾಡಿದ್ದೆ. ಅದು ಎಷ್ಟೇ ಕಡಮೆ ಪ್ರಮಾಣದ್ದಾಗಲೀ, ತನ್ನೆಲ್ಲವನ್ನೂ ಅಲಕ್ಷ್ಯ ದಿಂದ ಕಾಣುವುದು ಯಾವ ವ್ಯಕ್ತಿಗೂ ಸಂತಸ ತಾರದು.'

ಯಾರಾದರೂ ನಿಮಗೆ ವಿಶೇಷವಾದ ಸೊಬಗಿನಿಂದ ಕೂಡಿದ ಅಥವಾ ಅರ್ಥಪೂರ್ಣ ಪತ್ರ ಬರೆದಾಗ ನೀವು ನಿಮ್ಮ ಹೃತ್ಪೂರ್ವಕ ಮೆಚ್ಚುಗೆಯನ್ನು ವ್ಯಕ್ತಪಡಿಸುವುದ ರಿಂದ ವಿಮುಖರಾಗಬೇಡಿರಿ.

ಪತ್ರ ಬರೆಯುವ ಬಗೆಗಿನ ಯಾವುದೇ ಚರ್ಚೆಯಲ್ಲಿ ಯಾರಾದರೊಬ್ಬರು ಆಧುನಿಕ ವಿಧಾನಗಳಲ್ಲಿ ಅದನ್ನು ಮಾಡುವುದನ್ನು ಕುರಿತು ಹೇಳುವುದು ಖಂಡಿತ. ಜನಗಳ ನಡುವಣ ಸಂವಹನವು ಕಂಪ್ಯೂಟರುಗಳ ನಡುವಣ ಸಂವಹನ ಕ್ಕಿಂತ ಭಿನ್ನವಾದುದೆಂಬ ಅಂಶವನ್ನು ಅವರು ಒಪ್ಪುವುದಿಲ್ಲ.

ಪತ್ರ ಬರೆಯುವಾಗ ನಮ್ಮ ಸಮಾನಸ್ಥರೊಬ್ಬರೊಡನೆ ಮಾತನಾಡುತ್ತಿರುವಂತೆ ನಾವು ಬರೆಯಬೇಕೆಂಬುದು ಪತ್ರ ವ್ಯವಹಾರದಲ್ಲಿ ಅಪೇಕ್ಷಣೀಯವಾದುದು. ಹಠಾತ್ತಾದ ಅಸಭ್ಯತೆ ಮತ್ತು ಕಂದಾಚಾರದ ಸೌಜನ್ಯಯುತ ನಡತೆ— ಇವುಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಗಿ ಬಂದಲ್ಲಿ ನಾವು ಎರಡನೆಯದರತ್ತ ಒಲುವುದರಿಂದ ವ್ಯವಹಾರವು ಉತ್ತಮ ವಾಗಿರುತ್ತದೆ ಮತ್ತು ಮಾನವೀಯ ಸಂಬಂಧವು ಹೆಚ್ಚು

ಸುಖಕರವಾಗಿರುತ್ತದೆ. ಈಗ ಕೈ ಬಿಟ್ಟು ಹೋಗಿರುವ ಸೌಜನ್ಯಯುತ ಶಬ್ದಗುಂಫನಗಳಿಗೆ ಪ್ರತಿಯಾಗಿ ಬೇರೆ ಶಬ್ದ ಗುಂಫನಗಳನ್ನು ವಿದ್ಯಾರ್ಥಿಗಳಿಗೆ ಒದಗಿಸುವಲ್ಲಿ ಅನೇಕ ಶಾಲೆಗಳು ಅಲಕ್ಷ್ಯದಿಂದಿರುವುದು ತೀರ ವಿಷಾದಕರ ಅಂಶವಾಗಿದೆ.

ಒಬ್ಬ ಸ್ತ್ರೀ ಅಥವಾ ಪುರುಷ ಹೊಂದಿರಬಹುದಾದ ಅತ್ಯಂತ ಮಹತ್ತರ ಸಾಮಾಜಿಕ ಆಸ್ತಿಯೆಂದರೆ ಮೋಹಕತೆ (Charm). ಮತ್ತೆ, ಸನ್ನಡತೆಯಿಲ್ಲದೆ ಮೋಹಕತೆಯೂ ಇಲ್ಲ. ಹಾಗೆಂದ ಮಾತ್ರಕ್ಕೆ ಯಾವುದೇ ಕೆಲವು ನಿಯಮ ಗಳನ್ನು ಗುಲಾಮರಂತೆ ಅನುಸರಿಸುವುದೆಂದರ್ಥವಲ್ಲ. ಬದಲಿಗೆ ಸಹೃದಯ ಪ್ರೇರಣೆಗಳ ಸಂತತ ಆಚರಣೆಯಿಂದ ಹೊಳಪುಗೊಂಡ ನಡಾವಳಿಯನ್ನು ಸ್ವಾಭಾವಿಕವಾಗಿ ಬಳಸು ವುದೆಂದರ್ಥ.

ಒಂದು ಗುಂಪಿನಿಂದ ನಿಮ್ಮನ್ನು ಅತ್ಯಂತ ಪರಿಣಾಮಕಾರಿ ಯಾಗಿ ಎತ್ತಿ ಹಿಡಿಯುವ ಗುಣಲಕ್ಷಣವೆಂದರೆ ಸೌಜನ್ಯ. ಮತ್ತೊಬ್ಬನಲ್ಲಿ ನಿಮ್ಮ ನೆನಪು ಆಹ್ಲಾದವನ್ನುಂಟುಮಾಡುವ ಹಾಗೆ ಪ್ರತಿಯೊಬ್ಬರನ್ನೂ ನೀವು ಹೇಗೆ ಪರಿಗಣಿಸಬೇಕೆಂದು ಸೌಜನ್ಯವು ನಿಮ್ಮನ್ನು ರೂಪಿಸುತ್ತದೆ.

ರಾಲ್ಫ್ ವಾಲ್ಡೊ ಎಮರ್ಸನ್ ತನ್ನ 'ಕಾಂಡಕ್ಟ್ ಆಫ್ ಲೈಫ್' ನಲ್ಲಿ ಸೌಜನ್ಯದ ನಿಜಭಾವವನ್ನು ವ್ಯಕ್ತಮಾಡಿದ್ದಾನೆ. ಒಳ್ಳೆಯ ನಡೆವಳಿಯನ್ನು ಕೆಲವರು ತೋರಿಕೆಯೆಂದು ತಿರ ಸ್ಕರಿಸುತ್ತಾರೆ. "ಸಂತೋಷಕರ ವಿಧಾನಗಳಲ್ಲಿ ಕೆಲಸ ಮಾಡುವುದೇ ನಡೆವಳಿ. ಸಭ್ಯ ನಡತೆ ತೋರ್ಕೆಯೆನ್ನುವು ದಾದರೆ, ಮುಂಜಾನೆಯ ಹುಲ್ಲುಗಾವಲಿಗೆ ಅಷ್ಟೊಂದು ಗಹನತೆಯನ್ನು ತಂದುಕೊಡುವ ಮಂಜಿನ ಹನಿಗಳೂ ಅಷ್ಟೆಯೇ" ಎಂದೆನ್ನುತ್ತಾನೆ, ಎಮರ್ಸನ್.

---

ಕೆಲವು ತಿಂಗಳ ಹಿಂದೆ ಮೈಸೂರಿನ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಶಾಖೆಗೆ ಕಾರ್ಯನಿಮಿತ್ತ ಹೋಗಿದ್ದೆ. ಕೌಂಟರಿನಲ್ಲಿ ಚೆಕ್ ಕೊಟ್ಟು ಬಿಲ್ಲೆ (ಟೋಕನ್) ಪಡೆದು ಅಲ್ಲೇ ಗೋಡೆಯ ಬಳಿ ಹಾಕಿದ್ದ ಬೆಂಚಿನ ಮೇಲೆ ಕುಳಿತು, ನಗದಿ ಗುಮಾಸ್ತರು ನನ್ನ ಬಿಲ್ಲೆ ಸಂಖ್ಯೆಯನ್ನು ಕರೆಯುವುದನ್ನು ನಿರೀಕ್ಷಿಸುತ್ತಿದ್ದೆ. ಕೆಲವು ನಿಮಿಷಗಳಲ್ಲೆ ನನ್ನ ಬಿಲ್ಲೆ ಸಂಖ್ಯೆಯ ಕರೆ ಪಾವತಿ ಮೇಜಿನ (ಕೌಂಟರ್) ಕಡೆಯಿಂದ ಕೇಳಿ ಬಂದಿದ್ದರಿಂದ ಎದ್ದು ಆ ಕಡೆಗೆ ಹೊರಟೆ. ಬೆಂಚಿನಿಂದ ಏಳುವಾಗ, ಮೇಲೆ ಗೋಡೆಗೆ ನೇತು ಹಾಕಿದ್ದ ಸಲಹೆ ಪೆಟ್ಟಿಗೆ ನನ್ನ ತಲೆಗೆ ಜೋರಾಗಿ ತಾಕಿತು. ಸಾಕಷ್ಟು ನೋವೂ ಆಯಿತು. ಪಾವತಿ ಮೇಜಿನಿಂದ ಹಣ ಪಡೆದು ಬಂದು, ಕೂಡಲೆ ಈ ರೀತಿ ಸಲಹೆ ಬರೆದು ಪೆಟ್ಟಿಗೆಗೆ ಹಾಕಿದೆ. "ಸ್ವಾಮಿ, ಸಲಹೆ ಪೆಟ್ಟಿಗೆಯನ್ನು ಸ್ಥಳಾಂತರಿಸಿ, ಇಂತು, ತಲೆ ತಾಕಿಸಿಕೊಂಡು ನೋವಿ ಗೀಡಾದವ." ಮುಂದಿನ ಸಾರಿ ಬ್ಯಾಂಕಿಗೆ ಹೋದಾಗ ಸಲಹೆ ಪೆಟ್ಟಿಗೆ ಬೇರೆ ಸ್ಥಳದಲ್ಲಿ ನನ್ನನ್ನು ಸ್ವಾಗತಿಸಿತು.

**—ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ.**

(ಗ್ರಾಹಕರಿಗೆ ತಲೆ ತಾಕಿದ್ದರಿಂದ ಬ್ಯಾಂಕಿಗೆ ಬುದ್ಧಿ ಬಂತು, ಎನ್ನೋಣವೇ?—ಸಂ.)

---

## ಕರ್ನಾಟಕದ ವಿಕಾಸ ಹಾಗೂ ಬೆಳವಣಿಗೆಗೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸ್ಥಳೀಯ ಪ್ರಧಾನ ಕಛೇರಿಯೊಂದನ್ನು ಬೆಂಗಳೂರಿನಲ್ಲಿ ತೆರೆಯಬೇಕಾದ ಆವಶ್ಯಕತೆ ಇದೆ.

ಕರ್ನಾಟಕ ರಾಜ್ಯಕ್ಕೆ ಪ್ರತ್ಯೇಕವಾಗಿ ಬೆಂಗಳೂರಿನಲ್ಲಿ ಸ್ಥಳೀಯ ಪ್ರಧಾನ ಕಛೇರಿಯನ್ನು ತೆರೆಯುವುದರಿಂದ ಅನೇಕ ಪ್ರಯೋಜನಗಳು ಲಭಿಸುತ್ತವೆ. ಅವುಗಳಲ್ಲಿ ಕೆಲವನ್ನು ಹೆಸರಿಸುವೆವು:

(1) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಹೆಚ್ಚು ಹೆಚ್ಚು ಶಾಖೆಗಳು ಕರ್ನಾಟಕದಲ್ಲಿ ತೆರೆಯಲ್ಪಡುವುವು.

(2) ರಾಜ್ಯದ ದುರ್ಬಲ ಹಾಗೂ ನಿರ್ಲಕ್ಷಿಸಲ್ಪಟ್ಟಿರುವ ಜನಾಂಗಕ್ಕೆ ಹೆಚ್ಚಿನ ಧನಸಹಾಯ.

(3) ಸ್ಥಳೀಯರಿಗೆ ಹೆಚ್ಚಿನ ಉದ್ಯೋಗಾವಕಾಶ.

(4) ರಾಜ್ಯದ ಪ್ರತಿ ಜಿಲ್ಲೆಗೂ ಯೋಜಿತ ಆರ್ಥಿಕ ಅವಕಾಶಗಳು.

(5) ಸ್ಥಳೀಯ ಬೇಡಿಕೆಗಳ ಮೇರೆಗೆ ಸಾಲಸೌಲಭ್ಯಗಳು.

(6) ರಾಜ್ಯ ಸರ್ಕಾರದೊಡನೆ ಬ್ಯಾಂಕಿನ ನೇರ ಹಾಗೂ ಸುಲಭ ಸಂಪರ್ಕಾವಕಾಶಗಳು.

(7) ವಿವಿಧ ಕ್ಷೇತ್ರಗಳಲ್ಲಿ ಪರಿಣತಿ ಹೊಂದಿದ ತಜ್ಞರಿಂದ ಕೂಡಿದ 'ಸ್ಥಳೀಯ ಮಂಡಳಿ' ಅಸ್ತಿತ್ವಕ್ಕೆ ಬಂದು ಬ್ಯಾಂಕಿಗೆ ಅಧಿಕಾರಾರೂಢ ಸಲಹಾ ಮಂಡಲಿಯಾಗಿ ಕೆಲಸ ಮಾಡುವುದು.

(8) ಬ್ಯಾಂಕಿನ ಕೇಂದ್ರ ಮಂಡಲಿಯಲ್ಲಿ ರಾಜ್ಯದ ಸ್ಥಳೀಯ ಮಂಡಲಿಯ ಮೂಲಕ ಕಾರ್ಯಸ್ಥಾನ ದೊರಕುವಂತಾಗುವುದು.

(9) ಬೆಂಗಳೂರಿನಲ್ಲಿ ಕರ್ನಾಟಕಕ್ಕೆ ಸೀಮಿತವಿರುವ ಸ್ಟೇಟ್ ಬ್ಯಾಂಕಿನ ಉದ್ಯೋಗ ನೇಮಕಾತಿ ಮಂಡಲಿಯೊಂದನ್ನು ಸ್ಥಾಪಿಸಲಾಗುವುದು.

(10) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸ್ಥಳೀಯ ಪ್ರಧಾನ ಕಛೇರಿಯನ್ನು ಬೆಂಗಳೂರಿನಲ್ಲಿ ತೆರೆಯುವುದರಿಂದ ಒಟ್ಟಾರೆ ಕರ್ನಾಟಕದ ಸರ್ವತೋಮುಖ ಬೆಳವಣಿಗೆಗೆ ಭದ್ರ ಬುನಾದಿ ಹಾಕಿದಂತೆ ಆಗುವುದು.

ಕರ್ನಾಟಕ ವೃತ್ತ ತೆರೆಸಲು

**ಭಾರತೀಯ ಸ್ಟೇಟ್ ಬ್ಯಾಂಕ್ ಸಿಬ್ಬಂದಿ ಸಮಿತಿ**

ಸ್ಟೇಟ್ ಬ್ಯಾಂಕ್ ಕಟ್ಟಡ, ಸಂತ ಮಾರ್ಕ್ಸ್ ರಸ್ತೆ

ಬೆಂಗಳೂರು-೫೬೦ ೦೦೧

